# ಕೊರವಂಜಿ



ಏಪ್ರೆಲ್ ೧೯೪೪

ಮಾಸ ಪತ್ರಿಕೆ

ಸಂಪಾದಕರು :
ಶ್ರೀ|| ರಾ. ಶಿ.

ಚಿತ್ರಕಾರರು :
ಶ್ರೀ|| ಆರ್. ಕೆ. ಲಕ್ಷ್ಮಣ್.

ಬರಹಗಾರರು :

ಶ್ರೀ|| ಜಿ. ಎಸ್. ಸು.

ಶ್ರೀಮತಿ ರುದ್ರಮ್ಮ

ಶ್ರೀ|| ಪಾತಾಳಿ

ಶ್ರೀ|| ಖಾರಾಂತ

ಶ್ರೀ|| ಬೀರಣ್ಣ

ಬಿಡಿ ಪತ್ರಿಕೆ -- ಕೇವಲ ಎರಡಾಣೆ

## ತಿಳಿನಗೆಯ ಮಾಸ ಪತ್ರಿಕೆ.

# ಕೊರವಂಜಿ

ಕೊರವಂಜಿಯು ತಿಳಿನಗೆಯ ಸಚಿತ್ರ ಮಾಸಪತ್ರಿಕೆ. ತಿಳಿಹಾಸ್ಯದ ಲೇಖನಗಳು, ಹರಟೆಗಳು, ಅಣಕವಾಡುಗಳು, ನಗೆ ಹಾಡುಗಳು ಇವುಗಳಿಗೆ ಸರ್ವದಾ ಸುಸ್ವಾಗತವುಂಟು. ಆದರೆ ವ್ಯಕ್ತಿಯನ್ನುದ್ದೇಶಿಸಿ ಬರೆದ ಲೇಖನಗಳಿಗೆ ಎಡೆಯಿಲ್ಲ.

ಲೇಖನಗಳನ್ನು ಕಳುಹಿಸುವವರು ತಮ್ಮಲ್ಲಿ ಒಂದು ಪ್ರತಿಯನ್ನಿಟ್ಟುಕೊಂಡರೆ ಬಹಳ ಒಳಿತು. ಸುಲಭವಾಗಿ ಓದುವಂತೆ ತಿಳಿಬರಹದಲ್ಲಿ ಬರೆದರೆ, ಅಚ್ಚಾದಾಗ ತಪ್ಪುನೆಪ್ಪುಗಳು ಕಡಿಮೆಯಾಗುವುವು.

ಸಂಪಾದಕೀಯ ಪತ್ರವ್ಯವಹಾರಗಳನ್ನು ಸಂಪಾದಕರಲ್ಲೂ ವ್ಯವಸ್ಥಾಪಕರಲ್ಲಿ ಮಿಕ್ಕ ವಿಚಾರಗಳನ್ನೂ ಪ್ರಸ್ತಾಪಿಸಬೇಕು.

ಬಳೇಪೇಟೆ, ಬೆಂಗಳೂರು ಸಿಟಿ.

**ವಾರ್ಷಿಕ ಚಂದಾ ಅಂಚೆ ಮೂಲಕ ರೂ. ೨—೦—೦**

**ಬಿಡಿ ಪ್ರತಿ ಕೇವಲ ಆಣೆ ೦—೨—೦**

---

**ಚಂದಾದಾರರು ವಿಳಾಸ ಬದಲಾವಣೆಯಾದಲ್ಲಿ, ಕೂಡಲೆ ನಮಗೆ ತಿಳಿಸಿದರೆ, ಬಹಳ ಸಹಾಯ ಮಾಡಿದಂತಾಗುವುದು.**

---

## ವಿಷಯಾನುಕ್ರಮಣಿಕೆ

ಸಕಲವೂ ಪ್ರಿಯವಾದ

ಸಮರ ಕಾಲದಲ್ಲಿ



- ನಿಮಗೆ ಪ್ರಿಯವಾದ -

# "ರಾಜಾ ಸ್ನೋ"

ವನ್ನು ಜಾಗರೂಕತೆಯಿಂದ ಉಪಯೋಗಿಸಿ



ಮಣ್ಯಂ ಮತ್ತು ಕಂಪೆನಿ

ಬೆಂಗಳೂರು, - - ಮದ್ರಾಸು

# ಮೈಸೂರು ಲ್ಯಾಂಪ್ ವರ್ಕ್ಸ್,

## ಬೆಂಗಳೂರು

ಸಾರ್ವಜನಿಕರ ತಿಳಿವಳಿಕೆಗಾಗಿ ಈ ಕೆಳಗೆ 'ಮೈಸೂರು ಲ್ಯಾಂಪ್ಸ್" ಗಳ ನ್ಯಾಯವಾದ ಚಿಲ್ಲರೆ ಬೆಲೆಗಳು ಕೊಡಲ್ಪಟ್ಟಿವೆ. ಈ ಬೆಲೆಗಳು ಸಂಸ್ಥಾನಾದ್ಯಂತ ಜಾರಿಗೆ ಬರುತ್ತವೆ.

| ಪ್ರಕಾಶ | ತರಹೆ | | ದರ್ಜ ಬೆಲೆ<br>ರೂ ಅ. ಪೈ |
|---|---|---|---|
| 10-30 | ವಾಕ್ಯೂಂ | ಶುಭ್ರ Bc.<br>,, E. S. | 27—0—0 |
| 44-60 | ,, | ,, | 30—0—0 |
| 40 | ಗ್ಯಾಸ್ | ,, | 32—0—0 |
| 60 | ,, | ,, | 34—0—0 |
| 75 | ,, | ,, | 38—0—0 |
| 100 | ,, | ,, | 46—0—0 |
| 150 | ,, | ,, | 64—0—0 |
| 200 | ,, | ,, | 85—0—0 |
| 300 | ,, | ,, | 125—0—0 |

ಮೈಸೂರು ದೇಶದ ಏಜಂಟರು :—

**ಓರಿಯೆಂಟಲ್ ಎಲಕ್ಟ್ರಿಕ್ ಕಂಪೆನಿ,**

**ವಿಶ್ವೇಶ್ವರಪುರಂ, ಸಜ್ಜನ್‌ರಾಯರ ಪ್ಲೇಸ್,**

**ಬೆಂಗಳೂರು ಸಿಟಿ.**

# ಮೈಸೂರು

ಅರಗಿನ ಮತ್ತು ಎಣ್ಣೆಯ ಬಣ್ಣಗಳನ್ನೇ

## ಉಪಯೋಗಿಸಿರಿ!

ಲೇಪನಕ್ಕೆ ಬಹು ಸುಲಭವಾಗಿದ್ದು ದೀರ್ಘಕಾಲ
ತಾಳುವಂತಹವೂ ಮತ್ತು ಶೋಭಾಯಮಾನವನ್ನುಂಟು
ಮಾಡುವಂತಹವೂ ಆದ ಈ ಬಣ್ಣಗಳು
ಮೈಸೂರು ಸರಕಾರದ ಅರಗು ಮತ್ತು ಬಣ್ಣದ
ಕಾರಕಾನೆಯಲ್ಲಿ ಸಿದ್ಧವಾಗಿದೆ.



ವಿಶೇಷ ವಿವರಗಳಿಗಾಗಿ ಕೆಳಗಿನ ವಿಳಾಸಕ್ಕೆ ಬರೆಯಿರಿ :—

**ಮೈಸೂರು ಗವರ್ನಮೆಂಟ್ ಲ್ಯಾಕ್**
**ಮತ್ತು ಪೇಂಟ್ ವರ್ಕ್ಸ್**

**ಈದಿಗಾ—ಮೈಸೂರು**






# ಕು ಹ ಕಿ ಡಿ ಗ ಳು

---

ಜಪಾನೀಯರು ಮಣಿಪುರಕ್ಕೆ ಬಂದಿರುವುದು— ಮಣಿಪುರ ನೃತ್ಯವನ್ನು ಕಲಿಯಲೋಸುಗ ಅಲ್ಲವಂತೆ.

\+ + +

ಮಹಮ್ಮದ್ ಬಿನ್ ತೊಗಲಖಿನ ಆರ್ಥಿಕ ವ್ಯವಸ್ಥೆ ಎಂದು ಶ್ರೀಮತಿ ಸುಬ್ಬರಾಯನ್‌ರವರು ಅಂದರಂತೆ.

—ಚರ್ಮದ ಹಣವನ್ನು ಚಲಾಯಿಸಿದ ತೊಗಲಖನನ್ನು ಹೀಗೆ ಅವಮಾನ ಪಡಿಸಬಹುದೆ?

\+ + +

ಅಮೆರಿಕಾದಲ್ಲಿ ತುಂಬಾ ಕಾಗದವು ಮಿಗಿತಾಯವಾಗಿದೆಯಂತೆ

—ಅದೇಕೆ ಯೋಚನೆ. ನಮ್ಮದೇಶಕ್ಕೆ ಕಳಿಸಿದರೆ ಅದನ್ನೇ ಹಣವನ್ನಾಗಿ ಉಪಯೋಗಿಸುತ್ತೇವೆ.

\+ + +

ಇನ್ನುಮೇಲೆ ಸೀರೆಗಳು ತಯಾರಾದ ಊರಿನ ಹೆಸರನ್ನು ಪ್ರಚುರಪಡಿಸಬೇಕಂತೆ,

—ಅಂದಮೇಲೆ ಬೆಂಗಳೂರಿನಲ್ಲಿ ನೆಯ್ದ ಸೀರೆಯನ್ನು ಧರ್ಮಾವರದ್ದು ಎಂದು ಮಾರಲಾಗದೇ!

—o—

# ಉರಿಗಾಳು

"ಅಮ್ಮಾ! ಮಗು ಕಿರಿಚಿಕೊಳ್ಳುತ್ತಾ ಇದೆ, ಒಂದೇ ಸಮನೆ!"

"ಇಲ್ಲಿ ಕೊಡೋ! ನಾನು ಹಾಡು ಹೇಳುತ್ತೇನೆ...."

"ಹಾಗೂ ಹೆದರಿಸಿದೆ, ಅಮ್ಮಾ! ಅದ್ರೂವೆ ನಿಲ್ಲಿಸಲಿಲ್ಲ!"

* * *

ಆಕೆ: ಥೂ! ನೀವು ಎಂಥ ಕೆಲಸಮಾಡಿದೀರಿ, ಅಂದ್ರೆ.... ಚೆನ್ನಾಗಿಲ್ಲ.... ಹೀಗೆಲ್ಲ....

ಆತ: ತಪ್ಪಾಯಿತು; ಗೊತ್ತಾಗಲಿಲ್ಲ, ಇನ್ನುಮೇಲೆ ಮಾಡುವುದಿಲ್ಲ; ಕ್ಷಮಿಸು...............ಯಾವುದದು? ಹೇಳು?

* * *

ಆಕೆ: ನಿಮಗೆ ಸಂಗೀತ ಅಂದ್ರೆ ಪ್ರಾಣ ಅಂತ ನಮ್ಮಪ್ಪ ಹೇಳಿದರು

ಆತ: ನಿಜ, ಕಣೆ! ಅದ್ರೂ ನೀನೂ ಹಾರ್ಮೋನಿಯಂ ಬಾರಿಸಬಹುದು, ಬೇಕಾದ್ರೆ!

* * *

"ಏನುಸ್ವಾಮಿ! ತಮ್ಮ ಪಿಟೀಲನ್ನ ಹತ್ತು ರೂಪಾಯಿಗೆ ಕೊಡುತ್ತೀರೇನು?"

"ಚೆನ್ನಾಯಿತು! ಆಗಲೇ ಒಬ್ಬರುಬಂದು ಐವತ್ತುರೂಪಾಯಿಗೆ ಕೇಳಿದಾರೆ!"

"ಸರಿ! ಸರಿ! ಪಕ್ಕದಮನೆಯವರಿರಬೇಕು........"

* * *

"ನಿಮ್ಮೂರಲ್ಲಿ ಅಕ್ಕಿರಾಗಿ ಸ್ಥಿತಿಹೇಗೆ, ಗೌಡರೇ!"

"ಗೊತ್ತಿಲ್ಲ, ಸ್ವಾಮಿ! ನಾನಿನ್ನೂ ಪೇಪರ್ ಓದಿಲ್ಲ!"

* * *

"ನಮ್ಮ ಹುಡುಗ ಎಂಟೂವರೆ ತನಕ ಹಾಡುತ್ತಾನೆ. ಆಮೇಲೆ ಊಟ ಕ್ಕೇಳುತ್ತೇವೆ...... ನೀನೂ ಬಂದುಬಿಡು........ ಭಾರೀ ಡಿನ್ನರ್!.... ಬರಬೇಕು!"

" ಎಂಟೂವರೆಗೆ ಬರ್‍ತೀನಯ್ಯಾ ! "

*   *   *

" ಯುದ್ಧಾನಂತರದ ಶಾಂತಿಸಮ್ಮೇಳನದಲ್ಲಿ ಮಹಿಳೆಯರಿಗೂ ಪ್ರಾತಿನಿಧ್ಯ ವಿರಬೇಕೆಂಬ ಕೂಗು ಎದ್ದಿದೆ. " ಅಂದಮೇಲೆ, ಅದು ಶಾಂತಿ ಸಮ್ಮೇಳನವಾದೀತೆ ?

*   *   *

" ರೂಪಿಗಳಾದ ಹೆಂಗಸರೇ ಇಲ್ಲ " ಎಂದು ಸಿನಿಮಾನಿದರ್ಶಕರೊಬ್ಬರು ಅಭಿಪ್ರಾಯಪಟ್ಟಿದಾರೆ. ಅವರು ನಿದರ್ಶಿಸಿರುವ ಚಿತ್ರಗಳ ಗುಣಾವಗುಣಗಳನ್ನು ಕುರಿತು ನಾವು ಪ್ರಸ್ತಾಪಿಸಬೇಕಾಗಿಯೇ ಇಲ್ಲ.

*   *   *

" ಅಮ್ಮಾ ! ಏರೋಪ್ಲೇನ್ ಹೋಗ್ತಾ ಇದೆ, ನೋಡ್ತೀನಮ್ಮಾ ! "

" ನೋಡು ! ಪರವಾಯಿಲ್ಲ ; ತೀರಹತ್ರ ಹೋಗಬೇಡ ! "

*   *   *

" ಚಾಮುಂಡಿ ವ್ಯೂ " (Chamundi View) ಮನೆ ಎಲ್ಲಿದೆಸ್ವಾಮಿ ! "

" ಸಮಾವಿಲಾಸದ ಚಿತ್ರದ ಹಿಂಭಾಗದಲ್ಲಿ ಮೂರನೆಯ ಕ್ರಾಸ್ ನಾಲ್ಕನೆ ಮನೆ ಮೆಣಸಿನಕಾಯಿ ಗಡಂಗಿನ ಔಟ್‌ಹೌಸ್ ! "

ಇತ್ತೀಚೆಗೆ ಮಹಿಳೆಯರು ಧರಿಸುವ ಜಂಪರುಗಳು ವಿಲಕ್ಷಣವಾಗಿದೆಯಂತೆ —ವಿಲಕ್ಷಣವಾಗಿರದಿದ್ದರೆ, ಏನುಲಕ್ಷಣ ?

*   *   *

ನಮ್ಮ ಸ್ನೇಹಿತರಾದ ಸಂಗೀತಗಾರರೊಬ್ಬರು ಆರನೆಯಮನೆ ಶ್ರುತಿಹಿಡಿಯ ಬಲ್ಲರು. ಆದರೆ, ಹಿಡಿಯುವುದಿಲ್ಲ.... ಕೂತಿರುವ ಸಭಿಕರಮೇಲೆ ಬಿಟ್ಟುಬಿಡು ತ್ತಾರೆ, ಅದೇ ಫಜೀತಿ !

*   *   *

———o———

# ಸಂಪಾದಕೀಯ

## ತಾರಣ ಸಂವತ್ಸರದ ಯುಗಾದಿ

**ಕೊರವಂಜಿಯ ಮೂರನೆಯ ಹುಟ್ಟಿದ ಹಬ್ಬ.**
**ಅಂದಮೇಲೆ ನಾಡಿಗೆ ನಾಡೇ ಹಬ್ಬವನ್ನು ಆಚರಿಸುತ್ತಿದೆ.**
**ಇನ್ನುಮೇಲಾದರೂ ಶಾಂತಿ ಸೌಖ್ಯಗಳು ಸಕಲರಿಗೂ ಲಭಿಸಲೆಂದು**
**ದೇವರಲ್ಲಿ ಪ್ರಾರ್ಥಿಸುತ್ತಿದೆ.**

---o---

ಈ ವರ್ಷದಲ್ಲಿ ಭಾರತದಲ್ಲಿ ಶನಿಯು ರಾಜನಂತೆ. ಈಗಿನ ಸನ್ನಿವೇಶಗಳನ್ನು ನೋಡಿದರೆ, ಶನಿಯ ರಾಜ್ಯಭಾರವು ಅಷ್ಟಾಗಿ ಸುಖದಾಯಕವಾಗುವುದಿಲ್ಲವೆಂದು ಕಾಣುತ್ತದೆ. ಅದೇನೂ ನಮ್ಮಗಳಿಗೆ ಹೊಸ ಸುದ್ದಿಯಲ್ಲ. ಆದರೂ ಗುರುವು ಮಂತ್ರಿಯಾಗಿರುವುದರಿಂದ, ಸ್ವಲ್ಪಮಟ್ಟಿಗಾದರೂ ಶನಿಯ ರಾಜ್ಯಭಾರವು ಭಾರತದ ಏಳಿಗೆಗೆ ಕಾರಣವಾಗಬಹುದೆಂದು ಆಶಿಸಬಹುದು. ಏನೇ ಆಗಲಿ ಕೊರವಂಜಿಯು ವಿರಸಜೀವನವನ್ನು ಸರಸಜೀವನವನ್ನಾಗಿ ಮಾಡಲು ಕಂಕಣ ತೊಟ್ಟಿದ್ದಾಳೆ.

"ಇಲ್ಲಿನವರೆಗೂ ತನ್ನ ಬೆಳವಳಿಗೆಗೆ ಸಹಾಯಕರಾದ ಚಂದಾದಾರರೂ, ಜಾಹೀರಾತುಗಾರರೂ, ಲೇಖಕರೂ, ಚಿತ್ರಕಾರರೂ, ಅಚ್ಚುಕಾರರೂ, ಓದುಗರೂ ಇವರೆಲ್ಲರೂ ಈ ವರ್ಷ ಸುಖಸಂಪತ್ತುಗಳಿಂದ ಬಾಳಲಿ" ಎಂದು ಕೊರವಂಜಿಯು ಕೃತಜ್ಞತೆಯಿಂದ ಪ್ರಾರ್ಥಿಸುತ್ತಾಳೆ.

— ಸಕಲರೂ ಸುಖವಾಗಿರಲಿ —

* *

## ಬಡ್ತಿ ಕಾಲೇ

ಹೆಬ್ಬಿಗುಬ್ಬಾಲೆಯ ಪೌರಸಭೆಯಲ್ಲಿ ಇಂದು ಗಲಾಟೆಯೋ ಗಲಾಟೆ. ಕಾರಣ ಶ್ರೀಕಂಠೈಯ್ಯನಿಗೆ ಮೂವತ್ತು ರೂಪಾಯಿನ ಸಂಬಳದಿಂದ ಮೂವತ್ತೆರಡಕ್ಕೆ ಬಡ್ತಿ ದೊರೆತಿದ್ದು. ಅದೇ ಕಛೇರಿಯಲ್ಲಿ ಇಂಗ್ಲೀಷ್ ತಿಳಿದ ಬೈರಪ್ಪ, ಸಿದ್ದಲಿಂಗಯ್ಯ, ಎಲ್ಲಪ್ಪ ಮತ್ತು ಉಸ್ಮಾನ್ ಇವರುಗಳಿದ್ದರು, ಇವರುಗಳಿಗೆ ಬಡ್ತಿ ದೊರೆಯದೆ ಶ್ರೀಕಂಠಯ್ಯನಿಗೆ ದೊರೆತದ್ದು ಆಶ್ಚರ್ಯವೇ ಸರಿ. ಈ ಹಾರವ ಹೊಡೆದುಬಿಟ್ಟ ನಲ್ಲ—ಇದರ ಮರ್ಮ ಏನಿರಬಹುದು. ಈತನು ದೊಡ್ಡವರಿಗೆ ಲಂಚಕೊಡಲೂ ಶಕ್ತನಲ್ಲ. ಹೇಗಾಯಿತು ಎಂದು ಲೋಕಕ್ಕೆ ಲೋಕವೇ ವಿಸ್ಮಯಗೊಂಡಿತ್ತು.

ಮೊದಮೊದಲು ಈ ಸಂಗತಿ ನನಗೆ ತಿಳಿದಾಗ ನನಗೂ ಬಹು ಆಶ್ಚರ್ಯ ವಾಯಿತು. ಕಲಿಗಾಲದಲ್ಲಿ, ಹಾರವನು ಹಾರಿಹೋಗುವ ಕಾಲದಲ್ಲಿ, ಶ್ರೀಕಂಠಯ್ಯನು ಹೀಗಾದುದು ದೇವನ ಮಾಯೆಯೇ ಸರಿ. ಹೀಗಾಗಲು ಶ್ರೀಕಂಠಯ್ಯನು ಯಾವ ಯಾಗ ಮಾಡಿದ ಯಾವ ದೇವರನ್ನು ಪೂಜೆಮಾಡಿದ, ಯಾವರೀತಿಯಲ್ಲಿ ಮುಡುಪು ಕಟ್ಟಿ ಹರಸಿಕೊಂಡ, ಅವನ ಹೆಂಡತಿಯು ಯಾವ ಹೊರಕೆ ಹೊತ್ತಿದ್ದಳು ಇವೆಲ್ಲ ವನ್ನು ತಿಳಿಯಲೇಬೇಕು ಎಂದು ನಿಶ್ಚಯಿಸಿ ಅವನ ಮನೆಗೆ ಭಾನುವಾರ ಸಾಯಂ ಕಾಲ ಹೊರಟೆ. ಶ್ರೀಕಂಠಯ್ಯನೂ ಮನೆಯಲ್ಲಿಯೇ ಇದ್ದ. ಮಕ್ಕಳೊಡನೆ ಪಗಡೆ ಆಡುತ್ತಿದ್ದ.

'ಏನಯ್ಯಾ ಶ್ರೀಕಂಠಯ್ಯಾ ನಿನಗೆ ಬಡ್ತಿದೊರೆಯಿತಂತೆ'

'ಹೌದಯ್ಯಾ ದೊಡ್ಡವರ ಆಶೀರ್ವಾದ ಸಾಹೇಬರ ಔದಾರ್ಯ ನನ್ನ ಪುಣ್ಯ'

'ಎಲ್ಲರೂ ಇದೇ ಮಾತನಾಡುತ್ತಿದ್ದಾರಲ್ಲಯ್ಯ''.

"ಹೌದು, ನನಗೆ ಬಡ್ತಿ ದೊರೆತಾಗಿನಿಂದ ಯುದ್ಧದ ಮಾತನ್ನು ಎಲ್ಲರೂ ಮರೆತಂತಿದೆ ಟೋಜೊ ಇದಾನೆಯೊ ಹಿಟ್ಲರ ಮಟ್ಟವಾದನೋ, ಯಾವುದನ್ನೂ ಯಾರೂ ಲೆಕ್ಕಿಸರು ಕಡೆಗೆ ಗಾಂಧಿ, ನೆಹ್ರೂರವರ ಮಾತುಗಳೂ ಕಡಿಮೆಯಾಗ ಹತ್ತಿದೆ ಎಲ್ಲೆಲ್ಲೂ ನನ್ನ ಬಡ್ತಿಮಾತೆ 'ಹೇಗೆಸಿಕ್ಕಿತು ಈ ಹಾರವನಿಗೆ' ಇದೇ ಕುಶಲಪ್ರಶ್ನೆಯಾಗಿದೆ".

"ನನಗೂ ಅದೇ ಆಶ್ಚರ್ಯವಯ್ಯಾ ಅದಕ್ಕೆ ಬಂದೆ, ಇದು ಹೇಗೆ ಸಾಧ್ಯ ವಾಯಿತು"

'ಅಯ್ಯೋ ಅದೊಂದು ದೊಡ್ಡ ಕತೆ. ಕೇಳುವುದಕ್ಕೆ ಹೊತ್ತಿದ್ದರೆ ಹೇಳುತ್ತೇನೆ. ಹೇಗೂ ಈ ಪಗಡೆಯಾಟದಲ್ಲಿ ಸೋಲುತ್ತಿದ್ದೆ'. ಎಂದಂದು ಶ್ರೀಕಂಠಯ್ಯನು ಸಾವಧಾನವಾಗಿ ಹೇಳಲಾರಂಭಿಸಿದ.

' ನೋಡು, ಕೆಲವು ದಿನಗಳ ಹಿಂದೆ ನಮ್ಮ ಕಛೇರಿಯಲ್ಲಿ ಒಂದು ಸಂತೋಷ ಕೂಟವನ್ನು ಏರ್ಪಡಿಸಿದ್ದರು. ಪ್ರಧಾನಾಮಾತ್ಯರು ಬಂದಿದ್ದರು ಮಾನ್ಯ ಅತಿಥಿ ಗಳಾಗಿ. ನೋಡು ಆದಿನ ನೌಕರರೆಲ್ಲರೂ ಅಪರಿಮಿತ ಅಣಿಮಾಡಿಕೊಂಡರು. ಒಬ್ಬಾತನು ಕರಿಯ ನಿಲುವಂಗಿ ಎರವು ತಂದ. ಮೂರು ಹಗಲು ಮೂರುರಾತ್ರಿ ಕಷ್ಟಪಟ್ಟು ರುಮಾಲು ಸುತ್ತಿಸಿದ ಪಟ್ಟೆ ವಿಭೂತಿ ಇಟ್ಟು, ಸಂತೋಷಕೂಟಕ್ಕೆ ಸಿದ್ಧನಾದ.

ಮತ್ತೊಬ್ಬನು. ಹೊಸ ಅಂಗಿ ಷರಾಯಿ ಹೊಲಿಸಿಕೊಂಡ. ಮೂರು ಥಾನು ಬಟ್ಟೆಯಲ್ಲಿ ಒಂದು ಜತೆ ಷರಾಯಿ ಹೊಲಿಸಿದ ಪಂಜಾಬಿನವನೆಂದೂ ನಮ್ಮ ದೇಶದ ಉದ್ಧಾರಕ್ಕಾಗಿ ಬಂದವನೆಂದೂ ತನ್ನ ರುಮಾಲಿನ ಕುಚ್ಚಿನಲ್ಲೇ ಕಾಣಿಸಿಕೊಂಡ.

ಇನ್ನೊಬ್ಬನು. ನಾಲ್ಕು ದಿನ ಸೊಂಟದಿಂದ ಬಗ್ಗಿ ನಮಸ್ಕಾರಮಾಡು ವುದನ್ನು ಅಭ್ಯಾಸಮಾಡಿದ, ಥಡಿಯ ಕಡೆಗೂ ಬಗ್ಗಿ ನಮಸ್ಕಾರ ಮಾಡುವುದನ್ನು ಕಲಿತ.

ಮಗುದೊಬ್ಬನು ಕ್ಷೌರಮಾಡಿಸಿಕೊಂಡು ಬಟ್ಟೆಯನ್ನೆಲ್ಲಾ ಒಗೆದು ಇಸ್ತ್ರಿ ಮಾಡಿ ಮದುವೆಗಂಡಿನಂತೆ ಅಣಿಯಾದ.

ಒಬ್ಬೊಬ್ಬರೂ ಹೀಗೆ ಹಣವ್ಯಯಮಾಡಿ ಮೈಗೆ ಕಷ್ಟಕೊಟ್ಟು ಅಭ್ಯಾಸಮಾಡಿ ದರು. ನಾನಾದರೋ ಹಳೆಯಬಟ್ಟೆ, ಹಳೆಯಮುಖ ಏನುಮಾಡಲಿ ಎಂದು ಯೋಚಿಸಿದೆ. ಇರಲಿ ಪ್ರಧಾನಾಮಾತ್ಯರು ನನ್ನತನಕ ಬಂದಾಗ ನೋಡಿ ಕೊಳ್ಳೋಣ ಎಂದೆಂದು ಸುಮ್ಮನಾದೆ ಹಾಗೂ ನನ್ನ ಸರ್ವಿಸ್ ರೆಜಿಸ್ಟರು ಹತ್ತಿರ ಇರಲಿ ಎಂದು ಅದನ್ನು ಹತ್ತಿರ ಇಟ್ಟುಕೊಂಡೆ.

ಸಂತೋಷಕೂಟವು ಶುರುವಾಯಿತು. ಫಲಾಹಾರವಾಯಿತು. ಪ್ರಧಾನಾ ಮಾತ್ಯರು, ಸಭಾಧ್ಯಕ್ಷರೂ ಕೂಟಕ್ಕೆ ಬಂದವರನ್ನೆಲ್ಲಾ ಮಾತನಾಡಲಾರಂಭಿ ಸಿದರು ಒಬ್ಬೊಬ್ಬರ ಬಳಿಗೂ ಹೋಗಿ ಮಾತನಾಡಿ ಯೋಗಕ್ಷೇಮ ವಿಚಾರಿಸಲು ಆರಂಭಿಸಿದರು ನನ್ನ ಬಳಿಗೆ ಬರುವವೇಳೆಗೆ ಪ್ರಧಾನಾಮಾತ್ಯರ ಬೂಡ್ಸಿನ ದಾರವು ಕಳಚಿಕೊಂಡಿತ್ತು. ನಾನು ನೋಡಿದೆ. ಇದೇ ಸಮಯವೆಂದು, ಸ್ವಾಮಿ ಹೀಗಾಗಿದೆ. ಕಾಲಿಗೆ ತೊಡರಿಕೊಂಡರೆ ಸೊಂಟಕ್ಕೆ ಊನವಾಗಬಹುದು ಒಂದು ನಿಮಿಷ ತಾವು ನಿಂತರೆ ಸರಿಪಡಿಸುತ್ತೇನೆ ಎಂದು ಹೇಳಿ, ಕಣ್ಣುಮುಚ್ಚಿ ಬಿಡುವುದ ರೊಳಗೆ ಈ ದಾರವನ್ನು ಅಂದವಾಗಿ ಮಣಿಗಂಟು ಹಾಕಿದೆ. ಪ್ರಧಾನಾಮಾತ್ಯರು ನಿನ್ನ ಹೆಸರೇನು, ಕುಶಲವೇ ಎಂದರು. ತುಂಬಾ ವಂದನೆಗಳು ಎಂದರು. ಆ ಕೂಡಲೆ ನನಗೆ ಹೊಳೆಯಿತು. ಇದನ್ನು ಹೇಗಿದ್ದರೂ ಇವರು ಮರೆಯುತ್ತಾರೆ. ಮರೆಯದಂತೆ ಮಾಡಲು ಸರ್ವಿಸ್ ರೆಜಿಸ್ಟರೇ ಗತಿ ಎಂದು ಕೂಡಲೆ ರೆಜಿಸ್ಟರನ್ನು ತೆಗೆದೆ. ಮಹಾಘನವನ್ನು ಹೊಂದಿದ ತಮ್ಮ ಸ್ವಹಸ್ತಾಕ್ಷರದಲ್ಲಿ ತಮ್ಮ ರುಜುವಾಗ

ಬೇಕೆಂದು ಬೇಡಿದೆ. ನಸುನಗುತ್ತಾ ಅವರೂ ತಮ್ಮ ಸಹಿಯನ್ನು ಹಾಕಿದರು. ಹಾಗೆ ಹಾಕುವಾಗ ಅದು ಸರ್ವಿಸ್ ರೆಜಿಸ್ಟರ್ ಎಂದು ಅವರಿಗೆ ತಿಳಿದಿರಲಿಕ್ಕಿಲ್ಲ, ಅಲ್ಲಿಂದ ಮುಂದೆ ಹೋಗುವಾಗ ಸಭಾಧ್ಯಕ್ಷರ ಹತ್ತಿರ ' ಈತನು ಚೂಟಿ ಮನುಷ್ಯ ನೆಂದು ಕಾಣುತ್ತದೆ ' ಎಂದು ಹೇಳಿದರು.

ಇದಾದ ಮೂರು ತಿಂಗಳಿನಲ್ಲಿ ಈ ಬಡ್ತಿ ಪ್ರಶ್ನೆಯು ಬಂದಿತು, ಅರಮನೆಯ ಫೌಜುದಾರನು ಬೈರಪ್ಪನಿಗೆ ಬಡ್ತಿ ಕೊಡಬೇಕೆಂದು ಸಭಾಧ್ಯಕ್ಷರಿಗೆ ಬರೆದನು. ನಮ್ಮ ಕೋಮಿನವರು ದೇಶದಲ್ಲಿ ನಾಲ್ಕುಲಕ್ಷ. ನಾಲ್ಕು ಅಕ್ಷರ ಕಲಿತವರು ನಾಲ್ಕು ಜನ ಅವರಲ್ಲೊಬ್ಬ ನಾನು. ನನಗೇ ಕೊಡಬೇಕೆಂದು ಎಲ್ಲಪ್ಪನ ವಾದ. ಸಿದ್ದ ಲಿಂಗಯ್ಯನು ಸಭಾಧ್ಯಕ್ಷರೂ ನಾನೂ ಒಂದೇ ಬಸ್ತಿಗೆ ಹೋಗುವವರು. ನನಗಲ್ಲದೆ ಇನ್ಯಾರಿಗೆ ಎಂದು ಕೊಚ್ಚಿಕೊಳ್ಳಲಾರಂಭಿಸಿದನು. ಉಸ್ಮಾನನು ಇಡೀ ಮುಸ ಲ್ಮಾನ ಜನಾಂಗವೇ ನನ್ನ ಹಿಂದೆ ಇದೆ. ನನಗಲ್ಲದೆ ಇನ್ಯಾರಿಗೆ ಕೊಡುತ್ತೀರಿ ಎಂದು ಅಧ್ಯಕ್ಷರನ್ನೇ ಬೆದರಿಸಿದನು.

ಇವರುಗಳ ಜೋರಿನಲ್ಲಿ ನಾನೆಲ್ಲಿ—ಇರಲಿ ನೋಡೋಣ ಒಂದು ಕುಯುಕ್ತಿ ಎಂದು ಅದಿನ ಸರ್ವಿಸ್ ರೆಜಿಸ್ಟರನ್ನು ತೆಗೆದುಕೊಂಡು ಅಧ್ಯಕ್ಷರನ್ನು ನೋಡಿದೆ— ಯಾರೂ ಇಲ್ಲದಿರುವಾಗ. ಆ ಪುಸ್ತಕದಲ್ಲಿ ಪ್ರಧಾನಾಮಾತ್ಯರ ಸಹಿಯನ್ನು ತೋರಿಸಿದೆ. ಮುಂದೆ ಬಡ್ತಿ ಕೊಡುವ ಪ್ರಶ್ನೆಬಂದಾಗ ಜ್ಞಾಪಕವಿರಲಿ ಎಂದು ಸಹಿ ಹಾಕಿದ್ದರು. ತಮಗೆ ಹೇಳಹೇಳಿದ್ದರು. ಅದಕ್ಕಾಗಿ ನಿಮಗೆ ತೋರಿಸಿದೆ. ಹಾಗೂ ಇದರ ವಿವರಗಳನ್ನೆಲ್ಲಾ, ಇದು ವ್ಯವಸ್ಥೆಯಾದನಂತರ ಅವರಿಗೆ ಖುದ್ದಾಗಿ ಹೇಳಬೇಕೆಂದು ಹುಕುಂ ಮಾಡಿದ್ದಾರೆ ಎಂದೆ. ಹಾ-ಗೇ-ನ-ಯ್ಯಾ-ಎಂದು ದೀರ್ಘವಾಗಿ ಚಕಿತರಾಗಿ ಬಿಟ್ಟ ಬಾಯವರಾಗಿ, ದೈನ್ಯರಾಗಿಯೇ ಕೇಳಿದರು. ನಾನು ಸಹಜವಾಗಿ ಮುಚ್ಚಿದ ಬಾಯಿನಿಂದ, ಸಾವಧಾನವಾಗಿ ಹೌದು ಎಂದೆ.

ಅರಮನೆಯ ಫೌಜುದಾರ, ಮುಸಲ್ಮಾನ ಜನಾಂಗ ಅಧ್ಯಕ್ಷ ಸಮಜಾತಿ— ನಿರಕ್ಷರ ಕೋಮು, ಇವು ನಿರ್ವೀರ್ಯ. ಅದರಿಂದಲೇ ನನಗೆ ಬಡ್ತಿ ದೊರೆಯಿತು. ಮುಖ್ಯ ನೋಡು ' ಬಡ್ತಿಕಾಲೇ ಪ್ರಧಾನ ಸಚಿವನ್ನಾಮಸ್ಮರಣೆ ಗೋವಿಂದಾ— ಗೋವಿಂದ.......

—o—



ನಾ ಗ ರಿ ಕ

# ಕೋಲೆ ಬಸವ

ಹೆಬ್ಬಿ ಗುಬ್ಬಾಲೆಗೆ ಆಗ ತಾನೇ ರಾಮಯ್ಯನು ಬಂದಿಳಿದಿದ್ದನು. ಪರ ಪ್ರಾಂತ್ಯಗಳಲ್ಲೆಲ್ಲಾ ಸುತ್ತಾಡಿ, ಜನ ಜೀವನ, ಜನ ಸಾವುಗಳನ್ನೆಲ್ಲಾ ನೋಡಿ ಅರಿತು ಬಂದಿದ್ದನು. ಮಾದರಿಯ ಊರಾದ ಹೆಬ್ಬಿಗುಬ್ಬಾಲೆಯಲ್ಲಿಯೂ ಕೆಲವು ದಿನಗಳಿದ್ದು ಅಲ್ಲಿನ ಜನಜೀವನ, ಜನ ಭೋಜನ ಇತ್ಯಾದಿಗಳನ್ನು ನೋಡಿ ಹಿಂತಿರುಗಿ ತನ್ನೂರಿಗೆ ಹೋಗಿ ಅದರ ವಿಷಯದ ಪುಸ್ತಕ ಬರೆದು ಜೀವನೋಪಾಯ ನಡೆಸಿಕೊಳ್ಳಬೇಕೆಂದು ಬಂದಿದ್ದನು. ಬಂದವನೇ ಮುಸಾಫರಖಾನೆಯಲ್ಲಿ ಇಳಿದುಕೊಂಡು ಊರಿನವರ ಪರಿಚಯ ಮಾಡಿಕ್ಕೊಳ್ಳಲಾರಂಭಿಸಿದನು.

ಒಂದು ಮಧ್ಯಾಹ್ನ ಮೂರು ಗಂಟೆ ಸಮಯ, 'ಪೀ' ಎಂದು ಯಾರೋ ಓಲಗ ಮಾಡಿಸಿಕ್ಕೊಂಡು ಇವನ ಬಾಗಿಲ ಬಳಿಯಲ್ಲೇ ಬಂದಂತಾಯಿತು. ಎದ್ದು ಹೋಗಿ ನೋಡಿದರೆ ಮೈತುಂಬಾ, ಬಟ್ಟೆಮೇಲೆ ಬಟ್ಟೆ ಹಾಕಿಕೊಂಡಿದ್ದ ಒಂದು ಬಸವ. ತರಹಾವಾರಿ ಕಾರಾಬಾ ಮಣಿಗಳ ಮಾಲೆ, ಕವಡೆ ಸರ, ಜೇವಳದ ಗೆಜ್ಜೆ ಈ ರೀತಿಯಾಗಿ ಅಲಂಕೃತವಾದ ಸುಮಾರು ಬೆಳೆದ ಬಸವ. ಅದರ ಹಿಂದೆ ಯಥಾಪ್ರಕಾರ ಬಾಲದಂತೆ ಚಿಂದಿಬಟ್ಟೆ ಅರ್ಧಮರ್ಧ ಹಾಕಿದ ಹಳ್ಳಿಯವ ಒಬ್ಬ. ರಾಮಯ್ಯನನ್ನು ಕಂಡಕೂಡಲೆ ಬಸವನ ಬಾಲದಂತಿದ್ದವನು,

"ಈ ಮನೆ ಮಕ್ಕಳಿಗೆ ಒಳ್ಳೆಯದಾಗಲಿ, ದೇವರು" ಎಂದ.

ಬಸವ 'ಹ್ಞೂ' ಎಂಬಂತೆ ತಲೆಯನ್ನಲ್ಲಾಡಿಸಿತು.

'ಯಜಮಾನನಿಗೆ ಮಕ್ಕಳಾಗಲಿ.'

ಬಸವನು ಬೇಡವೆನ್ನಲಿಲ್ಲ. 'ಹ್ಞೂ' ತಿರುಗಿಸಿದ.

'ಅಷ್ಟೈಶ್ವರ್ಯ ಒದಗಲಿ'

ಬಸವನು ಆಗಲಿ ಎಂದ.

'ಸಾವಿರ ಕಾಲ ಸುಖವಾಗಿರಲಿ,'

ಬಸವನ ಅಭ್ಯಂತರವಿಲ್ಲ.

ಇದೇ ಪ್ರಕಾರ ಕಾಲು ಹಾಳೆಯಷ್ಟು ಮಾತು ನಟನೆಯಾಯಿತು.

ನಂತರ ರಾಮಯ್ಯನು ಕೊಟ್ಟ ಪಾವಲಿ ತೆಗೆದುಕೊಂಡು ಬಸವನು ಜುಗ್ಗಾಡುತ್ತಾ ಹೊರಟುಹೋದ.

◆ ◆ ◆

ಆ ದಿನ ಮಧ್ಯಾಹ್ನ ೪ ಗಂಟೆಗೆ ಪೌರಸಭಾ ಸೇರುವುದಿತ್ತು. ರಾಮಯ್ಯನು ಕಾರ್ಯ ಕಲಾಪಗಳನ್ನು ನೋಡಲೋಸುಗ ಅಲ್ಲಿಗೆ ಹೋದ. ಅಲ್ಲಿ ಹೋಗುವ

ವೇಳೆಗೆ ಸಭೆಯು ಕಾರ್ಯವನ್ನು ಆಗಲೇ ಆರಂಭಿಸಿತ್ತು. ಅಂದರೆ, 'ಟಿಫಿನ್' ಕಾರ್ಯವನ್ನು ಶ್ರದ್ಧೆಯಿಂದ ನೆರವೇರಿಸುತ್ತಿತ್ತು. ಅದು ಮುಗಿಯುವ ವೇಳೆಗೆ ಐದು ಗಂಟೆಯಾಗಿತ್ತು. ಸರಕಾರಿ ಅಧ್ಯಕ್ಷರು ಮುಖ್ಯಾಸನವನ್ನು ತುಂಬು ತುಂಬಿದರು. ಸದಸ್ಯರೆಲ್ಲರೂ ತಂತಮ್ಮ ಸ್ಥಾನಗಳಲ್ಲಿ ಕುಳಿತಿದ್ದರು. ಇಬ್ಬಿಬ್ಬರು ಸೇರಿ ಮೇಜಿನ ಮೇಲಿನ ಕಾಗದದ ಮೇಲೆ ಒಬ್ಬರಾಗುತ್ತಲೊಬ್ಬರು ಬರೆಯಹತ್ತಿದರು. ಏಕಾಂತಚಿತ್ತರಾಗಿ ಚುಕ್ಕಿ ಆಟ ಆಡುವಂತೆ ಭಾಸವಾಗುತ್ತಿತ್ತು. ಕೆಲ ಕಾಲದ ಮೇಲೆ ನೌಕರನೊಬ್ಬನು ಒಂದು ಕಾಗದವನ್ನು ಅಧ್ಯಕ್ಷರ ಮುಂದಿಟ್ಟನು. ಅಧ್ಯಕ್ಷರು ಒಂದು ಠರಾವನ್ನು ಮಂಡಿಸಿದರು. ಸದಸ್ಯರ ಅಭಿಪ್ರಾಯಗಳನ್ನು ಕೇಳಿದರು. ಮೊದಲ ಸ್ಥಾನದಲ್ಲಿ ಕುಳಿತಿದ್ದ ವೃದ್ಧರೊಬ್ಬರನ್ನುದ್ದೇಶಿಸಿ, ನನ್ನ ಠರಾವು ಬಹು ಸೂಕ್ಷ್ಮವಾದದ್ದಾದರೂ ಮಹತ್ವದ್ದು, ತಮ್ಮ ಅಭಿಪ್ರಾಯವೇನು ಎಂದರು. ಆತನು ಹ್ಞೂ ಎಂದು ತಲೆಯನ್ನಲ್ಲಾಡಿಸಿದರು.

ಇನ್ನು ಕೆಲವು ಸದಸ್ಯರು ವಿರೋಧಿಸಿ ಮಾತನಾಡಿದರು. ಈ ವಿರೋಧವು ನಿಮಗೆ ಒಪ್ಪಿಗೆಯೇ ಎಂದು ಮೊದಲಸ್ಥಾನದವರನ್ನು ಮರಳಿ ಕೇಳಿದರು ಅಧ್ಯಕ್ಷರು. ಛೇ, ಇಲ್ಲ ಎಂದನ್ನುವಂತೆ ತಿರುಗಿ ತಲೆಯಾಡಿಸಿದರು. ಅವರಂತೆಯೇ ಅವರ ಪಕ್ಕದಲ್ಲಿದ್ದ ಮೂವರೂ ತಲೆಯಾಡಿಸಿದರು. ಠರಾವು ಒಪ್ಪಿಗೆ ಪಡೆಯಿತೆಂದು ಅಧ್ಯಕ್ಷರು ಹೇಳಿ, ಇನ್ನೊಂದು ಠರಾವನ್ನು ಮಂಡಿಸಿದರು. ಅದೂ ಯಥಾಪ್ರಕಾರ.

ರಾಮಯ್ಯನವರಿಗೆ ಆಶ್ಚರ್ಯ. ಇದೇನಿದು ಮಧ್ಯಾಹ್ನ ಕೋಲೇ ಬಸವ ನೋಡಿದರೆ, ಸಾಯಂಕಾಲ ಕೋಲೆ ಸದಸ್ಯರನ್ನು ನೋಡಬೇಕಾಯಿತೇ ಎಂದಂದುಕೊಂಡರು.

ಹೊರಗೆ ಬಂದು ಮೊದಲ ಸ್ಥಾನ ಮತ್ತು ಅವರ ಪಕ್ಕದ ಮೂವರು ಯಾರೆಂದು ವಿಚಾರಿಸಿದರು. ಅವರುಗಳು ಸದಸ್ಯತ್ವಕ್ಕೆ ಹೊಸದಾಗಿ ನಾಮಕರಣವಾದವರು ಎಂದು ತಿಳಿಯಬಂತು.

* * *

ಮಾರನೆ ದಿನ ಊರ ಸಂಗೀತ ಸಮಾಜದ ವಾರ್ಷಿಕ ಉತ್ಸವ. ರಾಮಯ್ಯನವರು ಹಾಜರು. ಸಂಗೀತವು ಅರ್ಧ ಗಂಟೆ ಮುಗಿಯಿತು. ನಂತರ ಸಭೆಯ ವರದಿಯನ್ನು ಕಾರ್ಯದರ್ಶಿಗಳು ಓದಿದರು. ಮುಂದಿನ ವರ್ಷದ ಕಾರ್ಯಕ್ರಮದಲ್ಲಿ ಈ ತೆರನಾದ ಏರ್ಪಾಡು ಮಾಡಬೇಕು ಈ ತರಹ ಕಛೇರಿಗಳನ್ನೇರ್ಪಡಿಸಬೇಕು ನಿಯಮಗಳನ್ನು ಈ ರೀತಿ ಮಾರ್ಪಡಿಸಬೇಕು, ಹೀಗೆಲ್ಲಾ ಅಧ್ಯಕ್ಷರು ಒಂದು ವಿವರಣೆಯಿತ್ತರು.

ನಾಲ್ಕು ಜನ ಕೂಡಿದ ಜಾಗ. ನಾಲ್ಕು ಮನಸ್ಸುಗಳು ಸೇರಿದ ಸ್ಥಳ. ಒಬ್ಬರಾದರೂ ಎದ್ದು ಹೀಗಲ್ಲ ಹೀಗೆ ಎನ್ನಬೇಡವೇ. ಕಿಮಕ್ಕಮಕನ್ನದೆ ಎಲ್ಲರೂ

ತಲೆಯಾಡಿಸಿ ಸಮ್ಮತಿ ಸೂಚಿಸಿದರು. ಒಮ್ಮತದಿಂದ ಅಂಗೀಕೃತವಾದ ಠರಾವೆಂದರೆ ಇದೇ ಸಭೆಯದು.

ಹೊರಗೆ ಬಂದು ಯಾರು ಈ ಸಂಗೀತ ಸಮಾಜದ ಅಧ್ಯಕ್ಷರು ಎಂದು ವಿಚಾರಿಸುವಲ್ಲಿ, ಪ್ರಧಾನಾಮಾತ್ಯರೇ ಸಮಾಜದ ಅಧ್ಯಕ್ಷರೆಂದೂ, ಅವರ ಅಳಿಯಂದಿರೇ ಸಮಾಜದ ಪಾರುಪತ್ಯೇಗಾರರೆಂದೂ ತಿಳಿಯ ಬಂತು.

ಅಯ್ಯೋ ಈ ದಿನವೂ ಈ ಕೋಲೇ ಸಮಾಜವನ್ನು ನೋಡಬೇಕಾಯಿತೇ ಎಂದಂದುಕೊಂಡು ರಾಮಯ್ಯನವರು ಮುಸಾಫರ ಖಾನೆಗೆ ಹಿಂತಿರುಗಿದರು.

✣ ✣ ✣

ಮೂರು ದಿನಗಳಲ್ಲಿ ಶ್ರೀಯುತ ರಾಮಯ್ಯನವರು ಊರಿಗೆ ಬಂದಿರುವರೆಂದೂ ಊರ ವಿಚಾರದಲ್ಲಿ ಪುಸ್ತಕ ಬರೆಯುವರೆಂದೂ ಊರಲ್ಲೆಲ್ಲಾ ಸುದ್ದಿ ತಿಳಿಯಿತು. ನಮ್ಮ ಹೆಸರೂ ಪುಸ್ತಕದಲ್ಲಿ ಬರಲಿ, ಎಂಬ ಹೆದ್ದುದ್ದೇಶದಿಂದ ಸಮಾಜಸೇವಾಸಕ್ತ ಬಿರುದಾಂಕಿತರೂ, ಕರ್ಮಸೇವಾ ಧುರೀಣರೂ ಪ್ರಚಾಸೇವಾ ಪ್ರಚಂಡರೂ, ತಂಡ ತಂಡವಾಗಿ ಮುಸಾಫರಖಾನೆಗೆ ಬಂದು ರಾಮಯ್ಯನವರನ್ನು ಸಂದರ್ಶಿಸಿದರು. ತಮ್ಮತಮ್ಮ ಪ್ರವರಗಳನ್ನು ಸಾಕಷ್ಟು ಹೇಳಿಕೊಂಡರು. ತಾವು ಅಧ್ಯಕ್ಷರಾಗಿರುವ ಧರ್ಮ ಸಂಸ್ಥೆಗಳಿಗೆಲ್ಲಾ ರಾಮಯ್ಯನವರನ್ನು ಕರೆದುಕೊಂಡು ಹೋಗಿ, ಪ್ರೇಕ್ಷಕರ ಪುಸ್ತಕದಲ್ಲಿ ಸಹಿ ಹಾಕಿಸಿದರು.

ಇವರೆಲ್ಲರಿಗೂ ಮಿಗಿಲಾಗಿ ದೇಶಸೇವಾಪ್ರವೀಣ, ರಾಯಬಹದ್ದೂರ ಶ್ಯಾಮಾ ರಾಯರು ರಾಮಯ್ಯನವರನ್ನು ಭೋಜನಕ್ಕೆ ಮನೆಗೆ ಕರೆದುಕೊಂಡು ಹೋದರು. ತಮ್ಮ ಪ್ರತಾಪವನ್ನು ತುತ್ತು ತುತ್ತಿಗೂ ಕೊಚ್ಚಿಕೊಂಡರು. ತಾವು ಮಾಡಿದ ಸೇವೆ ತಮಗಾದ ಲಾಭ ಎಲ್ಲವನ್ನೂ ಹೇಳಿದರು. ಊಟವಾದ ಮೇಲೆ ಪರಸ್ಪರ ಮಾತು ಗಳಿಗಾರಂಭವಾಯಿತು. ರಾಮಯ್ಯನವರು ಹಿರಿಯೂರಿನವರೆಂದೂ, ದೇಶಾಂತರ ಪ್ರವಾಸ ಮಾಡಿದ್ದರೆಂದೂ, ಭೀಮಯ್ಯನವರ ಪುತ್ರರೆಂದೂ ತಿಳಿಯಬಂತು. ಭೀಮಯ್ಯನವರ ಸಾಕು ತಂಗಿ ಅಮ್ಮಯ್ಯನ ಸೋದರ ಸೊಸೆಯೇ ಶಾಮಾ ರಾಯರ ಮೂರನೆಯ—ಆಧುನಿಕ ಕುಟುಂಬವೆಂದೂ ತಿಳಿಯಬಂತು. ರಾಯರು 'ಲೇ' ಎಂದರು. 'ಲೇ' ಬಂದರು.

"ಇವರು ಯಾರು ಗೊತ್ತೇನೆ. ಭೀಮಯ್ಯನ ಮಗ" ಎಂದರು.

"ಯಾವ ನಮ್ಮ ಅಮ್ಮಯ್ಯನ ಸಾಕು ಅಣ್ಣನ ಮಗನೇ" ಎಂದು ಮಾರ್ದನಿ.

"ಹೂ ಕಣೇ ಊರೂರೆಲ್ಲಾ ಸುತ್ತಿ ಬಂದಿದ್ದಾನೆ. ಪುಸ್ತಕ ಬೇರೆ ಬರೆಯುತ್ತಾನೆ. ಪತ್ರಿಕೋದ್ಯೋಗಿ, ಬಂಗಾಳಾ, ಕಂಗಾಲಾ, ಪಂಜಾಬ್, ಪಪ್ಪಾಬ್, ಮುಂಬಯಿ, ಹಿಂಬಯಿ, ಎಲ್ಲಾ ಸುತ್ತಿದ್ದಾನೆ. ಇವತ್ತು ಸಿಕ್ಕಿದ್ದು ನಮ್ಮ ಪುಣ್ಯ"

"ಅದಿರಲಿ ಅಂದ್ರೆ. ಅವರೇನೋ ಊರೂರೆಲ್ಲಾ ಸುತ್ತಿದ್ದಾರೆ, ನನ್ನ ತಂತ್ರಾಲಯಕ್ಕೆ. ಸ್ವಾಮಿ ಸೇವೆಗೆ ಕರೆದುಕೊಂಡು ಹೋಗಿ ಎಂದರೆ, ರೈಲು

ಸಿಗುವುದು ಕಷ್ಟ. ನೂಕುನುಗ್ಗಲು ಎನ್ನುತ್ತೀರಿ. ಆತನನ್ನು ನೋಡಿ ಊರೆಲ್ಲಾ ಸುತ್ತುತ್ತಾರೆ. ಆತನನ್ನು ಕೇಳಿ ಹೇಗೆಹೊರಡಬೇಕು, ಏನೇನು ಸಿದ್ಧಮಾಡಿ ಕೊಳ್ಳಬೇಕು ವಿಚಾರಿಸಿ ತಿಳಿದುಕೊಳ್ಳಿ" ಎಂದು ಒಂದು ತೆರನಾಗಿ ಹುಕುಂ ಧ್ವನಿ ಯಲ್ಲಿ ಮಾತು ಹೊರಬಂತು.

ಪುಣ್ಯಾತ್ಮ ಶಾಮರಾಯ ಒಂದೊಂದು ಮಾತಿಗೂ ಹೂ ಎಂದು ತಲೆಯಾಡಿ ಸಿದ್ದ. ರಾಮಯ್ಯನವರನ್ನು ಕೇಳಿ ಕಾಗದದಲ್ಲಿ ಗುರ್ತು ಹಾಕಿದ್ದೂ ಹಾಕಿದ್ದೇ—

ಎಲ್ಲವೂ ಆದ ಮೇಲೆ ರಾಮಯ್ಯ ಹಿಂತಿರುಗಿದ.

✤ ✤ ✤

ಪ್ರಕಟಿತವಾದ ಪುಸ್ತಕದಲ್ಲಿ ಹೆಬ್ಬಿ ಗುಬ್ಬಾಲೆಗೆ ಒಂದು ಹಾಳೆ. ಕೋಲೇ ಬಸವನಪುರ, ಕೋಲೇ ಬಸವನ ಸಭೆ, ಕೋಲೇ ಬಸವನ ಸಮಾಜ, ಕೋಲೇ ಬಸವನ ಸಂಸಾರ, ಇತ್ಯಾದಿ—ವರ್ಣನೆ.

✤ ✤ ✤

---

"ನಮ್ಮ ಯಜಮಾನರು ದಿನವೂ ನಕ್ಷತ್ರಗಳನ್ನು ನೋಡುತ್ತಾ ಕೂತುಬಿಡು ತ್ತಾರೆ." ಎಂದು ಒಬ್ಬ ಮಹಿಳೆ ನಮಗೆ ಬರೆದಿರುವರು. ನಾವು ಸೂಚಿಸುವ ಕೆಲವು ತಾರೆಯರನ್ನು ನೋಡಿದರೆ, ಅವರು ಮನೆಬಿಟ್ಟು ಹೊರಗೆ ಹೊರಡುವುದೇ ಇಲ್ಲ.

✤ ✤ ✤

"ಕ್ರಾಪು ಮಾಡಿಕೊಂಡಿರುವ ತರುಣರನ್ನೇ ಈಗಿನ ತರುಣಿಯರು ಮೆಚ್ಚು ತ್ತಾರೆ" (ಜಾಹಿರಾತು) ವೀರರಮಣಿಯರ ಸಂಖ್ಯೆ ಕಡಿಮೆಯಾಗುತ್ತಿದೆ ಎಂಬುದಕ್ಕೆ ಇದೂ ಒಂದು ನಿದರ್ಶನ!

✤ ✤ ✤

ಶ್ರೀರಂಗಪಟ್ಟಣದ ಹತ್ತಿರ ಯಾರೋ ರಾತ್ರಿ ಎದುರುಪಾರ್ಟಿಯವರ ಹುಲ್ಲು ಮೆದೆಗೆ ಬೆಂಕಿ ಹಚ್ಚಿದರಂತೆ........ಅಂತಹ ರಾಷ್ಟ್ರೀಯ ರೀತಿ ನೀತಿಗಳು ನಮ್ಮಹಳ್ಳಿ ಗಳಲ್ಲೂ ವ್ಯಾಪಿಸುತ್ತಿವೆ!

✤ ✤ ✤

# ಕತ್ತೆ ಕಿರ್ಚುತಿದೆ ನೋಡಿದಿರಾ!

(ಶ್ರೀ॥ ಬೇಂದ್ರೆಯವರಲ್ಲಿ—ಕ್ಷಮಾಪಣೆಗಳೊಡನೆ)

---

ಇರುಳಿರುಳಳಿದು ದಿನದಿನ ಬೆಳಗೆ
ಸುತ್ತಮುತ್ತಲೂ ಮೇಲಕೆ ಕೆಳಗೆ
ಊರಿನ ಸಂದಿಯು ಗೊಂದಿಯ ಒಳಗೆ
ದಿನಮಣಿ ಮುಳುಗುವ ಹೊತ್ತಿನ ಒಳಗೆ
ಕತ್ತೆ ಕಿರ್ಚುತಿದೆ ನೋಡಿದಿರಾ !

ಕರಿ ನೆರೆ ಬಣ್ಣದ ಪಟ್ಟೆಗಳುಂಟು
ಕರಿ ಹೊಳೆ ಬಣ್ಣದ ಪುಚ್ಛಗಳುಂಟು
ಕೆನ್ನಿನ ಬೂದಿಯ ಬಣ್ಣಬಣ್ಣಗಳ
ಚರ್ಮವ ಕೂದಲು ಸುತ್ತಲು ಉಂಟು
ಕತ್ತೆ ಕಿರ್ಚುತಿದೆ ನೋಡಿದಿರಾ ?

ಯುಗಯುಗಗಳ ಹಣೆಬರೆಹವ ತಿಳಿದು
ಮನ್ವಂತರಗಳ ಭಾಗ್ಯವತುಳಿದು
ಮನುಷನ ಬಾಗೆ ಶಕುನವ ತೋರಿ
ಬೀದಿಯುಲಿಂಜಲ ಎಲೆಗಳ ನುಂಗಿ
ಕತ್ತೆ ಕಿರ್ಚುತಿದೆ ನೋಡಿದಿರಾ !

ಅಗಸನ ಹೆರವೆಯ ಮೂಟೆಯ ಹೊತ್ತು
ಬೆಳಗೂ ಬೈಗೂ ಊರನ ಸುತ್ತಿ
ಸುತ್ತಲು ಸುತ್ತಿ ಹಳ್ಳಿಹಳ್ಳಿಗಳ
ಹರವೆಯ ಕೊಟ್ಟೊ ಹರವೆಯ ತೆಗೆದೂ
ಕತ್ತೆ ಕಿರ್ಚುತಿದೆ ನೋಡಿದಿರಾ !

ಕತ್ತೆಯ ರೀತಿಯುಲರಚುವರಿಹರು
ಕತ್ತೆಯಂತೆಯೇ ದುಡಿಯುವರಿಹರು
ಜನಸಾಮಾನ್ಯಕೆ ಮಾದರಿಯಾಗಿಹ
ಕತ್ತೆಯ " ಕತ್ತೇ ! " ಎನ್ನಲುಬಹುದೆ

—ಜಿ. ಎಸ್. ಸು.

———o ———

# ಹೊಸ ಕಾದಂಬರಿಯ ಕಥೆ

ಶ್ರೀಗಂಗಾಧರ,
" ಲೇಖಣಿ "
ಇಂಕಿ ಬೀದಿ,
೮—೧—೧೯೪೪

ಶ್ರೀಮಾನ್ ದೋಷಿ ಅವರಿಗೆ—

ವಿಜ್ಞಾಪನೆಗಳು. ಆಧುನಿಕ ಕನ್ನಡ ಪ್ರಪಂಚದಲ್ಲಿ ನನ್ನ ಹೆಸರು ಚಿರಸ್ಥಾಯಿಯಾಗಿ ನಿಲ್ಲಬೇಕಾದರೆ ಕೇವಲ ವೇಷ ದೂಷಣೆಗಳಿಂದಾಗದು; ನನ್ನ ಮನೆ ಹೆಸರನ್ನುಳಿಸಿ ಗ್ರಂಥ ರಚನೆ ಮಾಡಬೇಕು—ಎಂದು ನಾನು ನಿರ್ಧರಿಸಿದೇನೆ. ನಿಮ್ಮ 'ಆಪತ್' ಗ್ರಂಥಮಾಲೆಯಲ್ಲಿ ಅದನ್ನು ಪ್ರಕಟಿಸಬೇಕಾದರೆ, ಅದರ ವಿಷಯ ಶೈಲಿ, ಪ್ರಮಾಣ ಇವು ಹೇಗಿರಬೇಕೆಂದು ತಿಳಿಸಿದರೆ, ಕೂಡಲೇ ನಿಮ್ಮ ಆಶಯಗಳಿಗನುಗುಣವಾದ ಕಾದಂಬರಿಯೊಂದನ್ನು ಕಳುಹಿಸಲು ಸಿದ್ಧನಿರುವೆ.

ನಿಮ್ಮವನಾದ,
**ಕನ್ನಡ ಚಟ್ಟೋಪಧ್ಯಾಯ.**

" ಮುದ್ರಾ ರಾಕ್ಷಸ "
ಮಂಕುದಿಣ್ಣೆ
೧೩—೧—೧೯೪೪

ಶ್ರೀಮಾನ್ ಕ. ಚಟ್ಟೋಪಾಧ್ಯಾಯ ಅವರಿಗೆ—

ನಮಸ್ಕಾರಗಳು. ನಿಮ್ಮ ಪತ್ರ ತಲಪಿತು. ನಮ್ಮ 'ಆಪತ್' ಗ್ರಂಥಮಾಲೆಗೆ ಅದರ ಆಪತ್ ಕಾಲದಲ್ಲೇ ಒಂದು ಕಾದಂಬರಿ ಬರೆದುಕೊಟ್ಟು ಅದನ್ನು ಉಜ್ಜೀವಿಸಲು ಮುಂದೆ ಬಂದಿರುವ ತಮ್ಮ ಕನ್ನಡ ಸೇವಾ ದುರಂಧರತೆಯನ್ನು ನಾನು ನಿಮ್ಮ ಗ್ರಂಥದ ಮೊದಲನೆಯ ಪುಟದಲ್ಲೇ ಮುಂದೆ ಜಗತ್ತಿಗೆ ತಿಳಿಸುವವನಿದ್ದೇನೆ. ನಿಮ್ಮ ಕಾದಂಬರಿ ಶುದ್ಧ ಸಾಹಿತ್ಯವಾಗಿರಕೂಡದು. ಪರಸ್ತ್ರೀ ವಿವಾಹ, ಸ್ವಸ್ತ್ರೀ ಕಲಹ ಇತ್ಯಾದಿಗಳಿಂದ ಕೂಡಿರದಿದ್ದರೆ ನಮ್ಮ ಕನ್ನಡ ಬಾಂಧವರು ಅದನ್ನು ಮುಟ್ಟುವುದಿಲ್ಲ. ಕಥಾನಾಯಕಿ ಆಸ್ಪತ್ರೆ ನರ್ಸಾಗಿದ್ದರೊಳ್ಳಿತು. ಕಥಾನಾಯಕನನ್ನು ಅಲ್ಲಿಯ ಡಾಕ್ಟರ್ ಮಾಡಬೇಡಿ. ಆತನಿಗೆ ಟಿ. ಬಿ. ಇದ್ದರೆ ಒಳ್ಳೆಯದು. ಆತನನ್ನು ಶಿಲ್ಪಿ ವಿಶಾರದನಾಗಿ ರಚಿಸಿರಿ. ಶಿಲ್ಪಿಗಳು ಯಾರೂ ಕನ್ನಡ ಸಾಹಿತ್ಯದಲ್ಲಿ ಅಡ್ಡದಾರಿ ಹಿಡಿದಿಲ್ಲ, ಇದುವರೆಗೂ. ನಿಮ್ಮ ಗ್ರಂಥವನ್ನೇ ನಿರೀಕ್ಷಿಸುತ್ತಿರುವ ಅಖಿಲ ಕರ್ನಾಟಕದ ಪರವಾಗಿ,

**ದೋಷಿ.**

" ಲೇಖಣಿ "
ಇಂಕಿಬೀದಿ,
೧೯—೧—೧೯೪೪

ಶ್ರೀಮಾನ್ ದೋಷಿ ಅವರಿಗೆ—

ವಿಜ್ಞಾಪನೆಗಳು, ನಿಮ್ಮ ಸಲಹೆಯಂತೆ ೨೫೦ ಪುಟದ ಒಂದು ಕಾದಂಬರಿಯನ್ನು ಈ ಮದ್ಯಾಹ್ನವೇ ನಿಮ್ಮ ವಿಳಾಸಕ್ಕೆ ಕಳುಹಿಸಿರುವೆನು. ನಾಯಕಿ ಆಸ್ಪತ್ರೆ ನರಸು! ನಾಯಕ ಬೇಲೂರು ಶಿಲಾ ಬಾಲಿಕೆಯರನ್ನು ಕೆತ್ತಿದ ಮಾಲೋಜಿ ಶಿವ್ಮೋಜರ ಪೂಜ್ಯ ಗುರುಗಳಾದ ಜಕ್ಕಣಾಚಾರಿಯ ವಂಶೀಕ. ಕನಸಿನಲ್ಲೀ ಸಂಧಿ ವಿಗ್ರಹಗಳನ್ನು ಕೆತ್ತಬಲ್ಲ ಮೇಧಾವಿ. ಟಿ. ಬಿ.! ಸಂಜೆ ದಿನವೂ 102, 103. ಕೆಮ್ಮಿದರೆ ರಕ್ತ, ಕೆರೆ ಏರಿಯಮೇಲಿನ ದೃಶ್ಯವನ್ನು ನಿಮ್ಮ ವಾಚಕರು ಶುದ್ಧವೆಂದು ಎಂದಿಗೂ ಎಣಿಸಲಾರರು. ಗ್ರಂಥ ಹೊರಬರುವ ದಿನವನ್ನು ತಿಳಿಸಿ, ನನ್ನ ಅನೇಕ ಮಿತ್ರರಿಗೆ ನಾನು ಎಚ್ಚರಿಕೆಕೊಡಬೇಕಾಗಿದೆ—

ಕನ್ನಡ ಚಟ್ಟೋಪಾಧ್ಯಾಯ.

" ಮುದ್ರಾರಾಕ್ಷಸ "
ಮಂಕುದಿಣ್ಣೆ,
೨೮—೧—೧೯೪೪

ಶ್ರೀಮಾನ್ ಚಟ್ಟೋಪಾಧ್ಯಾಯ ಅವರಿಗೆ—

ನಮಸ್ಕಾರಗಳು. ನಿಮ್ಮ ಕಾದಂಬರಿ ಕೈಸೇರಿತು. ನಿಮ್ಮ ಬರವಣಿಗೆ ಇಷ್ಟು ಅಶುದ್ಧವಾಗಿರುತ್ತದೆ ಎಂದು ನಾನು ಎದುರು ನೋಡಿರಲಿಲ್ಲ. ಭಲೆ. ಕೆರೆ ಏರಿ ದೃಶ್ಯವನ್ನು ಓದಿದ ಕೂಡಲೇ ವಾಚಕರೇ ಆಸ್ಪತ್ರೆಗೆ ಹೋಗಿ ಕಣ್ಣಿಗೆ ಕಾರ್ಬಾಲಿಕ್ ಹಾಕಿ ಕೊಳ್ಳಬೇಕಾದದ್ದೇ!

ಆದರೆ, ಈಚೆಗೆ ಶ್ರೀಮಾನ್.................ರವರು ತಮ್ಮ ಉದ್ಗ್ರಂಥವನ್ನು ಪ್ರಕಟಿಸಿದಮೇಲೆ, ವಾಚಕರ ರುಚಿ ಬೇರೆಕಡೆ ತಿರುಗಿದೆ. ಅವರು ಧರ್ಮ ಗ್ರಂಥಗಳನ್ನೇ ಬಯಸುತ್ತಿದಾರೆ. ಇದೇ ಕಾದಂಬರಿಯನ್ನು " ಕ್ಷಯರೋಗಿಯ ಕ್ಷಮಾಪಣೆ " ಎಂದು ತಿರುಗಿಸಿ, ಆತನ ಬಾಯಿಂದಲೇ ಪಶ್ಚಾತ್ತಾಪ ಹೊರಡಿಸಿ. ಕೆರೆ ಏರಿಮೇಲೆಯೇ ಆತನ ಪಶ್ಚಾತ್ತಾಪ ಪ್ರಾರಂಭಿಸಲಿ. ಉದ್ದಕ್ಕೂ ಉಪನಿಷತ್ತುಗಳನ್ನು ಬೆರಸಿ.

ನಿಮ್ಮ ಶ್ರೇಯೋಭಿಲಾಷಿ,
ದೋಷಿ.



*

" ಲೇಖನಿ "

ಇಂಕಿಬೀದಿ,

೫—೨—೧೯೪೪

ಶ್ರೀಮಾನ್ ದೋಷಿಯವರಿಗೆ—

ವಿಜ್ಞಾಪನೆಗಳು. ಅಂತೂ ಕನ್ನಡದ ಮಹಾ ಬರಹಗಾರರ ಗುಂಪಿಗೆ ಸೇರಿದ ನನ್ನನ್ನ ನೀವು ತುಂಬಾ ಸತಾಯಿಸುತ್ತಿದೀರಿ! ಇದು ನಿಮಗೆ ನ್ಯಾಯವೆ? ಆದರೂ, ನೀವು ಹೇಳಿದಂತೆ ಮಾರ್ಪಡಿಸಿ ಕಾದಂಬರಿಯನ್ನು ಕಳುಹಿಸಿದೇನೆ. ಉಪನಿಷತ್ತುಗಳು ಸಿಗಲಿಲ್ಲ. ನರಸುವಿನ ವಯಸ್ಸನ್ನು ೨೨ ರಿಂದ ೩೪ಕ್ಕೆ ಏರಿಸಿದೇನೆ. ಟಿ. ಬಿ. ಯ ಟೆಂಪರೇಚರನ್ನು ಕೊಂಚ ಕಡಿಮೆಮಾಡಿದೇನೆ. ಒಪ್ಪಿಗೆಯೇ? ಕೆರೆ ಏರಿ ಈಗ ಹೇಗಿದೆ? ನಿಮ್ಮ ಗೆಳೆಯ—ಇನ್ನು ಮುಂದಿನ ಈ ಅಡ್ಡ ಹೆಸರಿನ,

ಕನ್ನಡ ಚಟ್ಟು.

" ಮುದ್ರಾರಾಕ್ಷಸ "

ಮಂಕುದಿಣ್ಣೆ,

೧೫—೨—೧೯೪೪

ಶ್ರೀಮಾನ್ ಚಟ್ಟು ಅವರಿಗೆ—

ನಮಸ್ಕಾರಗಳು. ನನ್ನ ಗ್ರಂಥಮಾಲೆಯಲ್ಲಿ ನಿಮ್ಮ ಕಾದಂಬರಿಯನ್ನು ಪ್ರಕಟಿಸಬಹುದೆಂದು ನಮ್ಮ ಸಲಹೆಗಾರರು ಸಮ್ಮತಿಸಿದಾರೆ. ಆದರೆ, ಅದಕ್ಕೆ ರಾಜಕೀಯಪಕ್ಷದ ನಾಯಕರೊಬ್ಬರಿಂದ ಮುನ್ನುಡಿಯನ್ನು ಸಂಪಾದಿಸಿಕೊಟ್ಟರೆ, ಅದನ್ನು ನಾನು ಪ್ರಕಟಿಸುತ್ತೇನೆ. ಪ್ರಸಿದ್ಧಸಾಹಿತಿಗಳಾದ ಶ್ರೀಮಾನ್........... ರವರು ಮೊನ್ನೆ ನಮ್ಮ ಮಾಲೆಯ ಕುಸುಮವೊಂದಕ್ಕೆ ಮುನ್ನುಡಿ ಬರೆದ ನಂತರ, ಕನ್ನಡಿಗರಿಗೆ ಇತರರ ಮುನ್ನುಡಿ ಓದಬೇಕೆಂಬ ಆಸೆ ಉಂಟಾಗಿದೆ. ಯಾವುದಾದರೂ ರೀತಿಯಲ್ಲಿ ಮುಖಂಡರೆನಿಸಿ ನೋಡುವರೊಬ್ಬರ ಮುನ್ನುಡಿಯನ್ನು ನೀವು ಸಂಪಾದಿಸಿದರೆ, ನಿಮ್ಮ ಗ್ರಂಥ ಜನಪ್ರಿಯವಾಗುವುದರಲ್ಲಿ ಸಂದೇಹವಿಲ್ಲ—

ನಿಮ್ಮ ದೋಷಿ.

" ಲೇಖಣಿ "

ಇಂಕಿಬೀದಿ,

೨೯—೨—೧೯೪೫

ಶ್ರೀಮಾನ್ ದೋಷಿ ಅವರಿಗೆ—

ವಿಜ್ಞಾಪನೆಗಳು. ನಿಮ್ಮ ಉದಾತ್ತ ಸಲಹೆಯಂತೆ, ನಾನು ಕಾರಾಗೃಹಕ್ಕೆ ಹೋಗಿ ಬಂದವರ ಪಟ್ಟಿಯನ್ನು ತರಿಸಿ, ಅವರ ಈಗಿನ ವಿಳಾಸಗಳನ್ನು ಹುಡುಕಿ,

ಹೆತ್ತಾರು ಮನೆತಿರುಗಿ, ಕಡೆಗೆ ಶ್ರೀಮರ್ಾ..............ರನ್ನು ಕಂಡು ಮುನ್ನುಡಿ ಮಾತನ್ನೆತ್ತಿದೆ, ನಾಲ್ಕುವರ್ಷದ ಹಿಂದೆ ಯಾರೋ ಒಬ್ಬರು ಬರೆಯಬೇಕೆಂದಿದ್ದ "ಕಾರಾಗೃಹ" ಎಂಬ ಗ್ರಂಥಕ್ಕೆ ಅವರು ಮುನ್ನುಡಿ ಸಿದ್ಧಪಡಿಸಿದ್ದರಂತೆ. ಅದನ್ನೇ ಅವರು ನನಗೆ ಕೊಟ್ಟು ಕರುಣಿಸಿದಾರೆ. ಆದ್ದರಿಂದ ನಾನು ನನ್ನ ಕ್ಷಯರೋಗಿಯನ್ನೂ ಅದಕ್ಕನುಗುಣವಾಗಿ ಕಾರಾಗೃಹಕ್ಕೆ ಕಳುಹಿಸಿ ಒಂದೆರಡು ಅಧ್ಯಾಯಗಳನ್ನು ಸೇರಿಸಿದೇನೆ. ನಾಯಕಿಗೆ ನರಸು ಎಂಬ ಹೆಸರನ್ನೇ ಇಟ್ಟು ಆಕೆಯನ್ನು ಒಂದು ಅನಾಥಾಲಯದ ಸಂಚಾಲಕಿ ಮಾಡಿದೇನೆ. ಅಂತು, ಕೆರೆ ಏರಿ ಒಂದುಳಿದಿದೆ, ನನ್ನ ಮೊದಲ ಕಥೆಯಿಂದ ಇದುವರೆಗೆ !

ನಿಮ್ಮವನೇ ಆದ

**ಕನ್ನಡ ಚಟ್ಟು.**

"ಮುದ್ರಾರಾಕ್ಷಸ"

ಮಂಕುದಿಣ್ಣೆ,

೧೦—೩—೧೯೪೪

ಶ್ರೀಮರ್ಾ ಚಟ್ಟು ಅವರಿಗೆ—

ನಮಸ್ಕಾರಗಳು. ಮುನ್ನುಡಿ ಚೆನ್ನಾಗಿದೆ. ಮುನ್ನುಡಿಯನ್ನನುಸರಿಸಿ ನೀವು ಬರೆದ ಹೊಸ ಅಧ್ಯಾಯಗಳನ್ನೂ ನಮ್ಮ ಸಲಹೆಗಾರರು ಅನುಮೋದಿಸಿರುವರು. ಆದರೆ, ಕೆರೆ ಏರಿಯನ್ನೂ ಕಿತ್ತು ಹಾಕಬೇಕೆಂದು ಅವರು ಹಟ ಹಿಡಿದಿರುವುದರಿಂದ ಆ ಕೆಲಸವನ್ನು ತಮ್ಮಿಂದ ಮಾಡಿಸಲು ಮನ ಬರದೆ ನಾನೇ ಇಲ್ಲಿ ನೆರವೇರಿಸಿದೇನೆ. ನಿಮ್ಮ ಪುಸ್ತಕವನ್ನು ಅಚ್ಚುಮಾಡಲು ತಕ್ಕುದಾದ ಕಾಗದ ದೊರೆತಕೂಡಲೇ ಅದನ್ನು ಅಚ್ಚುಕೂಟಕ್ಕೆ ಕಳುಹಿಸುತ್ತೇವೆ. ಅಲ್ಲಿ ಮೊಳೆ ಜೋಡಿಸುವವರೂ ಕರಡು ತಿದ್ದುವವರು ಮಾಡಬಹುದಾದ ಮಾರ್ಪಾಟುಗಳಿಗೆ ನಾವು ಹೊಣೆಗಾರರಲ್ಲ—

ಇತಿ,

**ದೋಷಿ.**

# ನವೀನ ಗಾದೆಗಳು

(ಅಡಿಗೆ ಮನೆಯವು)

---

ಉಕ್ಕಿ ಹೋದ ಹಾಲಿಗೆ ಬಿಕ್ಕಿಬಿಕ್ಕಿ ಅತ್ತಳು.

ಸರಸು, ಸರಸು ಅಂತ ಸೆರಗು ಹಿಡಿದುಕೊಂಡು ಓಡಾಡಿ, ಬಡಿಸು ಬಡಿಸು ಹೊತ್ತಾಯಿತು, ಅಂದರೆ, ಅಡಿಗೆ ಆಗುತ್ತದೆಯೇ ?

ಸಾವಿರ ರೂಪಾಯಿ ಸಂಬಳ ತಿಂದರೂ, ಸಾರು ಬೇಕು, ಅನ್ನ ಬೇಕು.

ಹೊಸದರಲ್ಲಿ ಗಂಡ ಹಸಿ ಹಿಟ್ಟೇ ತಿಂದ.

ತುಂಗೆ ನೀರಾದರೇನು, ಗಂಗೆ ನೀರಾದರೇನು, ಇಂಗುಹಾಕಿದರೆ ಸಾರು ಚೆನ್ನ.

ಅಡಿಗೆ ರುಚಿ ಬಡಿಸುವವರಿಗೇ ಗೊತ್ತು.

ಹಬ್ಬಕ್ಕೆ ಕಾಸಿಲ್ಲ ಅಂದರೆ, ಸಾಸುವೆ ಡಬ್ಬಿ ತೋರಿಸಿದಳಂತೆ.

ಒಲೆಗೆಲ್ಲ ಒಂದೇ ಮಂತ್ರ, "ಕುರ್ವೀತ ಜಲಗೋಮಯೋಃ"

ಪಾವಕ್ಕಿಗೆ, ಪಾವಲಿ ಸೌದೆ.

ಉತ್ತರನದೇನು ಮಹಾ! ಎಲ್ಲರ ಪೌರುಷಾನೂ ಎಲೆ ಮೇಲಿನ ಊಟಕ್ಕೆ ತಕ್ಕಹಾಗೇನೆ !

ಖೀರು ಕೇಳಿದ ಗಂಟಲಿಗೆ, ನೀರು ಬಿಟ್ಟಹಾಗೆ.

ತಪ್ಪಾಯ್ತು ಅಂದರೆ, ಚಪ್ಪಾತಿ ಬೇಯುತ್ತದೆಯೇ ?

ಹೋಗು ಅಂದಾಗ ಹೊರಡದೆ ಇದ್ದರೆ, ಹೊಗೆ ಹಾಕಿಬಿಟ್ಟೇನು.

—ಶ್ರೀಮತಿ ರುದ್ರಮ್ಮ.

---

# " ಗಳಿಳರ ಚರಿತ್ರೆಯ ಉತ್ತರಗಳು "

---

**ಮಹಮ್ಮದ್ ಬಿನ್ ತೊಗಲಕ್—**

ಹೆಸರಾದ ದಿಲ್ಲೀಶ್ವರನಿವನು. ಪೂರ್ವಕಾಲದಲ್ಲಿದ್ದವನಾದರೂ ಇವನ ವಂಶೀಯರು, ಇವನ ಬುದ್ಧಿಯ ಮಕ್ಕಳು, ಈಗಲೂ ರಾಜ್ಯಭಾರದಲ್ಲಿ ಹೆಚ್ಚು ಹೆಚ್ಚು ಪಾತ್ರವನ್ನು ಹೊಂದಿದ್ದಾರೆ.

**ಕಲ್ಕತ್ತಾದ ಕತ್ತಲೆಯ ಕೋಣೆ—**

ಇದರಿಂದ ಆ ಕಾಲದಲ್ಲೂ ಬ್ಲಾಕ್‌ಔಟ್ ಸಾಂಗವಾಗಿ ನೆರವೇರುತ್ತಿದ್ದೆಂಬುದು ಗೊತ್ತಾಗುತ್ತದೆ ಚಾರಿತ್ರಕರ ಮನಸ್ಸೇ ಗಾಢಾಂಧಕಾರದಲ್ಲಿದ್ದರೂ ಹೀಗಾಗ ಬಹುದೆಂದು ಹಲವಾರು ಜನರ ಮತ.

**ಎರಡನೆಯ ಇಂಗ್ಲೀಷರ ಯುದ್ಧ—**

ಈ ಯುದ್ಧದಲ್ಲಿ ಮರಾಟೆಯವರೂ ಮಹಮ್ಮದೀಯರೂ ವೀರಾವೇಶದಿಂದ ಭಾರತದಲ್ಲಿ ಹೋರಾಡಿದರು. ಇವರಿಬ್ಬರ ಜಗಳದಲ್ಲಿ ಇಂಗ್ಲೀಷರು ಲಾಭ ಹೊಂದಿದುದರಿಂದ ಈ ಹೆಸರೇ ಸ್ಥಿರವಾಯಿತು.

**ಮೂರನೆಯ ಪಾಣಿಪತದ ಸಂಗ್ರಾಮ—**

ಹಸ್ತಲಾಘವವನ್ನು ಕೊಡಲು ಹೋದ ಇಂಗ್ಲೀಷರಿಗೆ ಕೈಕೊಟ್ಟು ತಪ್ಪಿಸಿ ಕೊಳ್ಳಲೆತ್ನಿಸಿದುದರಿಂದ ಈ ಸಂಗ್ರಾಮವು ಉಂಟಾಯಿತು

**ಹೊಯ್ಸಳ—**

ಆಗಂತುಕವಾಗಿ ಬಂದ ಹುಲಿಯನ್ನು ಹೊಯ್ದು ಸಳ ಮಹಾಶಯನಿಂದ ಆರಂಭವಾದ ಮನೆತನ. ಈಗಲೂ ಈತನ ವಂಶೀಯ ಕರ್ಣಾಟಕರು ಹೊಯ್ ಎಂದರೆ ಬಾಯಿಗೆ ಕೈ ಹೊಯ್ದೇ ಹೊಯ್ಯುತ್ತಾರಂತೆ.

**ಸೀಪಾಯಿ ದಂಗೆ—**

ಬಿಳಿ ಸೈನಿಕರಲ್ಲಿ ಇದು ಆಗಿಂದಾಗ್ಗೆ ಆಗುತ್ತಲೇ ಇರುತ್ತದೆ. ಸಾರ್ವಜನಿಕ ಸರಪರಾಜು ಸಾಕಷ್ಟು ಚೆನ್ನಾಗಿ ನಡೆಯದೆ ಇರುವುದರಿಂದಲೇ ಈ ದಂಗೆಗಳು ಉಂಟಾಗುತ್ತದೆಂಬುದು ಚಾರಿತ್ರಕ ವಿಷಯ.

—o—

# ರೈಲು ಸರಾಗ

ಸ್ವಾಮಿಾ,

ರೈಲು ಪ್ರಯಾಣದಷ್ಟು ಬೇಸರವಾದ ಕಾರ್ಯಕ್ರಮ ಬೇರೊಂದಿಲ್ಲ. ಗಾಡಿಯೊಳಗೆ ಸ್ಥಳ ಸಂಪಾದಿಸುವುದು, ಸಂಪಾದಿಸಿದ ಮೇಲೆ ಇತರರನ್ನು ಹೊರಕ್ಕೆ ತಳ್ಳುವುದು, ಒಳಗಿರುವವರ ಎಂಜಿಲು ಹೊಗೆಯನ್ನು ನುಂಗುವುದು, ಅವರ 'ಮೂಗು ಧೂಳ'ನ್ನು ಕಣ್ಣಿಗೆ ತುಂಬಿಕೊಳ್ಳುವುದು, ಅವರ ಪತ್ರಿಕೆಗಳನ್ನು ಕದ್ದೋದುವುದು, ಅವರ ಗೃಹಕೃತ್ಯದ ಕಿಲುಬುಗಳನ್ನು ಕಿವಿಗೆ ಹಾಕಿಕೊಳ್ಳುವುದು, ಅವರ ಎಳೇ ಮಕ್ಕಳ ವಾಕರಿಕೆಗೆ ನಮ್ಮ ಧೋತ್ರವನ್ನು ತೋರಿಸುವುದು—ಹೀಗೆ ನಾನಾ ಬಗೆಯ ತೊಂದರೆಗಳನ್ನು ನಾವು ಅನುಭವಿಸಬೇಕಾಗಿದೆ. ಟಿಕೀಟಿಗೆ ಹಣ ಹೆಚ್ಚಾದರೂ ಅದನ್ನು ಪಡೆದ ಜನ ಹೆಚ್ಚು! ಆದ್ದರಿಂದ ನೂಕು ನೂಕು ಹೆಚ್ಚು, ಪ್ರಯಾಣಕ್ಕೆ ಬೇಕಾಗಿರುವ ಕಾಲವೂ ಹೆಚ್ಚು. ನಮ್ಮ ದೇಶದಲ್ಲಿ ಈಚೆಗೆ ಆತ್ಮಹತ್ಯೆಗಳೂ, ಹುಚ್ಚೂ ಹೆಚ್ಚಿರುವುದಕ್ಕೆ ರೈಲು ಪ್ರಯಾಣದ ಕಷ್ಟಗಳೇ ಮುಖ್ಯ ಕಾರಣ.

ಆದರೆ, ನಿಮ್ಮೂರು ರೈಲಿನ ಅಧಿಕಾರಿಗಳು ಪ್ರಯಾಣಿಕರ ಬೇಸರಿಕೆಯನ್ನು ಕಳೆಯಲು ಕೆಲವು ಮನೋರಂಜಕ ಕಾರ್ಯಗಳನ್ನು ಏರ್ಪಡಿಸಿರುವುದು ಶ್ಲಾಘನೀಯವಾಗಿದೆ. ಅದನ್ನು ನಾನು ಎಂದಿಗೂ ಮರೆಯಲಾರೆ. ಬೀರೂರು, ಸಾಗರ ಲೈನಿನಲ್ಲಿ ರೈಲಿನವರದೇ ಆದ ತರೀಕೆರೆ ಅನಾಹುತದ ಲಾವಣಿಯನ್ನು ಹಾಡಿಸುತ್ತಾರೆ. ಬೆಂಗಳೂರು ಮೈಸೂರು ಲೈನಿನಲ್ಲಿ ತಂಗಿಯನ್ನು ಕೊಲ್ಲಲು ಹೋಗಿ ತಾನೇ ಹಾವಿನ ಕಡಿತದಿಂದ ಸತ್ತ ದುರಾತ್ಮನಾದ ಅಣ್ಣನ ಕಥೆಯನ್ನು ಹಾಡಿಸುತ್ತಾರೆ. ತಮಿಳು ದೇಶದಿಂದ ಹುಡುಗರನ್ನು ಆಮದು ಮಾಡಿ ಅವರಿಂದ ಆ ದೇವಭಾಷೆಯ ಅನೇಕ ಜನಪದ ಗೀತೆಗಳನ್ನು ಹಾಡಿಸಿ ರೈಲುಗಾಡಿಗಳು ಅವರ ಗಾನಗೊಂದಲದಿಂದ ಮೊಳಗುವಂತೆ ಮಾಡಿದಾರೆ. ಸದರಿ ಮೇರೆ ಗಾಡಿಗಾಡಿಗೂ ಹೊಸ ಗಾಯಕರು ಬಂದು ಪ್ರಜಾ ಸೇವೆ ಮಾಡುವಂತೆ ವಿಚಕ್ಷಣೆಯಿಂದ ನೋಡಲಾಗಿದೆ. ವಚನಗಳಿಂದಲೂ ದಾಸರ ಪದಗಳಿಂದಲೂ ದಾನದ ಮಹಾತ್ಮೆಯನ್ನು ಸಾರುವ ರತ್ನಗಳನ್ನು ಆರಿಸಿ, ಅಪಶ್ರುತಿಯ ಮೂಲಕ ಪ್ರಯಾಣಿಕರ ಕಿವಿತೆರೆಯಿಸಿ ಅವುಗಳನ್ನು ಮನಸ್ಸಿಗೆ ನಾಟುವಂತೆ ಮಾಡುತ್ತಿದಾರೆ. ಇದು ಅತ್ಯುತ್ತಮವಾದ ಧರ್ಮಪ್ರಚಾರದ ಕೆಲಸ. ಪ್ರಚಾರಕರನ್ನು ಉಚಿತವಾಗಿ ಊರಿಂದೂರಿಗೆ ಸಾಗಿಸುತ್ತಾ ಇರುವುದು ರೈಲ್ವೆ ಅಧಿಕಾರಿಗಳ ಉದಾತ್ತ ಧ್ಯೇಯವನ್ನು ತೋರ್ಪಡಿಸುತ್ತದೆ. ನವನಾಗರಿಕರಾಗಿರಬಹುದಾದ ಹಲವು ಪ್ರಯಾಣಿಕರ ಅನುಕೂಲಕ್ಕಾಗಿ ಈ ಗಾಯಕರು ಕೆಲವು ಸಿನಿಮಾ ಹಾಡುಗಳನ್ನೂ ಅವುಗಳ ತಮಿಳು ವೇಷಾಂತರಗಳನ್ನೂ ಹಾಡುತ್ತಿರುವುದು ರೈಲಿನ ಮುಂದೋಲನವನ್ನು ಸ್ಪಷ್ಟೀಕರಿಸುತ್ತದೆ.

ಆದರೆ, ಈ ಏರ್ಪಾಟನ್ನು ರೈಲ್ವೆ ಅಧಿಕಾರಿಗಳು ಇನ್ನೂ ಉತ್ತಮಪಡಿಸ ಬಹುದೆಂದು ಸೂಚಿಸಲು ಇಚ್ಛಿಸುತ್ತೇನೆ. ನಿಮ್ಮ ಊರಿನ ಪ್ರವಾಸದ ಫಲವಾಗಿ ನನಗೆ ಕೆಳಕಂಡ ಸಲಹೆಗಳು ಹೊಳೆದವು. ಅವುಗಳನ್ನು ಅನುಸರಿಸುವ ಭಾರ, ಇಲ್ಲವೆ, ಸರಿಸುವ ಭಾರ ನಿಮ್ಮದು. ನಾನು ಎಷ್ಟಾದರೂ ದೂರದ ಕಲ್ಕತ್ತೆ ಯಲ್ಲಿರುವವನು.

೧. ಗಾಯಕರಿಗೂ ಧರ್ಮ ಪ್ರಚಾರಕರಿಗೂ ಶುಭ್ರವಾದ ಸಮ ವಸ್ತ್ರಗಳನ್ನು ಕೊಡುವುದು.

೨. ಗಾಡಿ ಚಲಿಸುತ್ತಿರುವಾಗ ಹತ್ತಕೂಡದೆಂದು ಅವರಿಗೆ ತಿಳಿಯಪಡಿಸು ವುದು; ಮತ್ತು ಹಿಂಬಾಗಿಲಿಂದಲ್ಲದೆ, ಮುಂಬಾಗಿಲಿಂದಲೂ ಬರಬಹು ದೆಂದು ಅವರಿಗೆ ತಿಳಿಸುವುದು.

೩. ಶಾರೀರ ಚೆನ್ನಾಗಿರುವವರನ್ನೇ ಆರಿಸಿ ನಿಯಮಿಸುವುದು; ಅವರಿಗೆ ಆರು ತಿಂಗಳಕಾಲ ಸಂಗೀತ ಶಿಕ್ಷಣ ಕೊಡಿಸುವುದು; ರೈಲಿನ ಚಕ್ರದ ಕಟಕಟ ಶ್ರುತಿಗೆ ಹೊಂದಿಸಿ ಹಾಡಬಲ್ಲವರನ್ನೇ ಗೊತ್ತುಮಾಡುವುದು.

೪. ಎಂದೋ ಎಲ್ಲೋ ಆದ ಅನಾಹುತದ ಲಾವಣಿಯನ್ನು ಇಂದೂ ಹಾಡು ವವರು ನಮಗೆ ಬೇಡ. ನಿನ್ನೆಯ ಮೊನ್ನೆಯ ಅನಾಹುತವನ್ನು ಕುರಿತು ಲಾವಣಿ ಕಟ್ಟಿ ಹಾಡಬಲ್ಲವರು ನಮಗೆ ಬೇಕು ಆದ್ದರಿಂದ ಅವರು ಆಶುಕವಿಗಳಾಗಿದ್ದರೆ ಸ್ವಾರಸ್ಯ ಹೆಚ್ಚು. ಇಲ್ಲದಿದ್ದರೆ, ಇಲಾಖೆಯವರೇ ಲಾವಣಿ ಮಾಡಿಸಿ ಕಲಿಸುವುದು ಒಳ್ಳೆಯದು.

೫. ಆಧುನಿಕ ಕನ್ನಡ ಕವನಗಳನ್ನೂ ಕಲಿತು ಈ ಪ್ರಚಾರಕರು ನಾಲ್ಕು ಜನರ ಕಿವಿಗೆ ಬೀಳಿಸಲಿ. ಇಳಿದುಹೋಗಲು ಅವಕಾಶವಿಲ್ಲದಿರುವಾಗ ಲ್ಲದೆ ಮತ್ತೆ ಯಾವಾಗ ನಾವು ಜನರಿಗೆ ಅವುಗಳ ರುಚಿಯನ್ನು ತೋರಿ ಸಲು ಸಾಧ್ಯ?

೬. ಮುಂದಿನ ಅಥವಾ ಹಿಂದಿನ ಸ್ಟೇಷನ್ ವಿಷಯವಾಗಿ ಆಕರ್ಷಣೀಯವಾದ ಪದಗಳನ್ನು ಕಟ್ಟಿ ಹಾಡಿದರೆ, ಪ್ರಯಾಣಿಕರ ತಿಳಿವಳಿಕೆಯೂ ದೇಶಾಭಿ ಮಾನವೂ ಹೆಚ್ಚುವುದು. ವ್ಯಾಪಾರದ ದೃಷ್ಟಿಯಿಂದಲೂ ಅನುಕೂಲ. ಮಂಡ್ಯದ ಸಕ್ಕರೆ, ಗಂಜಾಮದ ಅಂಜೂರ, ಮದ್ದೂರು ವಡೆ, ಕ್ಲೋಸ್ಪೇಟೆ ತೆರೆಯುವ ದಿನ, ಶಿವಪುರದ ರಾತ್ರಿ ಸಂತೆ, ಹಾಸನದ ಜಾತ್ರೆ, ದೇವ ನೂರು ಲಕ್ಷ್ಮೀಶ, ನಂಜನಗೂಡು ತೇರು ಹೀಗೆ ಆಯಾ ಊರು ಹತ್ತಿರ ಬಂದಾಗ ಅದರದರ ಜನಸಂಖ್ಯೆ, ಅಮಿಲ್ದಾರರ ಹೆಸರು, ವಿಳಾಸ, ಅಸೆಂಬ್ಲಿ ಮೆಂಬರುಗಳ ಪಟ್ಟಿ—ಹೀಗೆ ಹಾಡುತ್ತಾ ಬಂದರೆ, ರೈಲೇ ವಿಶ್ವವಿದ್ಯಾನಿಲಯ, ಅದನ್ನು ಬಿಡುವವನೇ ಬೃಹಸ್ಪತಿ!

೭. ಸಂಗೀತ ಸಾಹಿತ್ಯಗಳನ್ನು ಕೇಳಿದ ಅನೇಕರು ಈಗ ಗಾಡಿಯಲ್ಲಿ ಮುಖ ತಿರುಗಿಸಿ ಕೂತು, "ಇವನು ಕುರುಡ! ಇವನಿಗೆ ಕಾಣಿಸುವುದಿಲ್ಲ" ಎಂಬ ಸುಳ್ಳು ನಂಬಿಕೆಯಿಂದ, ಕಾಸು ಹಾಕದೆ ಕುಂಭೀಪಾಕಕ್ಕೆ ಹೋಗುತ್ತಿದಾರೆ ಇದನ್ನು ತಪ್ಪಿಸಲು ಒಂದೇ ದಾರಿ. ರೈಲ್ವೆ ವರಮಾನದಿಂದಲೇ ಈ ಖರ್ಚನ್ನೂ ವಹಿಸಿ, ಪ್ರಯಾಣಿಕರನ್ನು ಚಿಲ್ಲರೆ ಕಾಟದಿಂದ ಉದ್ಧಾರ ಮಾಡಬೇಕೆಂದು ನೀವು ಪ್ರಾರ್ಥಿಸಬಹುದು

ನನ್ನ ಸಲಹೆಗಳೆಲ್ಲವನ್ನು ನಿಮ್ಮವರು ಅಂಗೀಕರಿಸಿ ನನ್ನ ಮುಂದಿನ ಪ್ರಯಾಣ ಸರಾಗವಾಗಿ ಸಾಗಲಿ ಎಂದು ಆಶಿಸುವ,

ನಿಮ್ಮವನಾದರೂ ನಿಮ್ಮಿಂದ ಬಹು ದೂರದಲ್ಲಿರುವ,

ನಾ........ದಪ್ಪ, ಕಲ್ಕತ್ತ.

---

ರೇಷನ್ ಪದ್ಧತಿ ಜಾರಿಯಲ್ಲಿರುವವರೆಗೆ ಮಹಾಪ್ರಾಣಗಳನ್ನೆಲ್ಲ ಅಲ್ಪಪ್ರಾಣಗಳಾಗಿ ಉಚ್ಚರಿಸಲು ಶಾಲಾ ವಿದ್ಯಾರ್ಥಿಗಳಿಗೆ ಅನುಮತಿಕೊಡಬೇಕೆಂದು ಶಿಕ್ಷಣ ಇಲಾಖೆಯ ಅಧಿಕಾರಿಗಳಿಗೆ ಒಂದು ಬೇಡಿಕೆ ಬಂದಿದೆಯಂತೆ.

✦ ✦ ✦

"ಕನ್ನಡ ಚಲನಚಿತ್ರಗಳ ವಿಷಯವಾಗಿ ನಾವು ಎಷ್ಟು ಹೇಳಿದರೂ ಸಾಲದು" ನಿಜ! ಆದರೂ, ಅನೇಕರು ಹೇಳಿಬಿಡುತ್ತಾರೆ! ಅದೇ ಬಂದಿರುವುದು ಕಷ್ಟ!

✦ ✦ ✦

ಗಂಡು ಹುಡುಗರಿಗಿಂತ ಮುಂಚೆ ಹೆಣ್ಣು ಮಕ್ಕಳು ಮಾತಾಡುತ್ತವಂತೆ! ಮುಂಚೇನೂ ಅವರದೇಮಾತು, ಆಮೇಲೂ ಅವರದೇಮಾತು!

✦ ✦ ✦

"ಹೋಟಲುಗಳಲ್ಲಿಟ್ಟಿರುವ 'ಮೈಸೂರುಪಾಕ್' ತುಂಡಿನಮೇಲೆ ಕಾಲಂಗುಲ ಧೂಳು ಕೂತಿರುತ್ತದೆ." ಆದರೂ, ಅದರ ರುಚಿ ಅಷ್ಟೇ ಹೊಲಸಾಗಿರುತ್ತದಲ್ಲಾ!

✦ ✦ ✦

# ಕುಮಾರಸ್ವಾಮಿಯು ಹಾಡಿದನೆಂದರೆ!

(ಅಣಕವಾಡು)

---

ಕುಮಾರ ಸ್ವಾಮಿಯು ಹಾಡಿದನೆಂದರೆ
ಸಭೆಯಲಿ ಗುಡುಗೇ ಮೊಳಗುವುದು ;
ಕೋಪವು ಕಣ್ಣಲಿ ಸಿಡಿವುದು ; ಬಾಯಲಿ
ಶಾಪದ ಪದ ತುಳುಕಾಡುವುದು !
ಬರಿ ಮರುಭೂಮಿಯೆ ತೋರುವುದು
    ಆತನ ಗಾನದಲಿ
    ಆಗಿನ ಡೊಂಬಿಯಲಿ
ಕಟುಕರ ಆರ್ಭಟೆ ಮೊರೆಯುವುದು !
    ಕೈ ಕಲ್ಲರಸುವುದು !
ತಾಳದ ತೊಡೆ ಕೈ ಹೊಡೆತದಲಿ,
ಸರಿಗಮ ಪದನಿಸ ರಗಳೆಯಲಿ,
ನರಳುವ ರಾಗದ ಸಂಘಟ್ಟಣೆಯಲಿ,
ಸ್ವರ ವಕ್ರಧ್ವನಿ ಚೀತ್ಕಾರದಲಿ,
    ಸಾಯುವ ಧಾಟಿಯಲಿ
    ಬೀಳುವ 'ಸಾಟಿ'ಯಲಿ
ನಸು ನೋತಿರುವಾ ಪ್ರಾಣದಲಿ,
ತುಸು ಕೂತಿರುವಾ ಕಂಠದಲಿ,
ಕೊರೆಯುವ ಲಯಗಳ ಹೇಷಾರವದಲಿ,
    ಕಿವಿ ಉರಿಯುವುದು !
    ಎದೆ ಮುರಿಯುವುದು !
ಕುಣಿಯುವ ಷಡ್ಜದಿ ಪಂಚಮಗೂಡಿ
ಕೆಮ್ಮುವ ಕರ್ಕಶ ಶಬ್ದವು ಸೇರಿ
    ಕಿವಿ ಒಡೆಯುವುದು !
    ಕೈ ಹುಡುಕುವುದು !
ಕೇಳಿರಿ ! 'ಕದನ ಕುತೂಹಲವ' !
    ಒಣ ಗೀತೆಯನು
    ಒಣ ರೀತಿಯಲಿ
ರೋದಿಸುವನು ನಿರ್ಭೀತಿಯಲಿ !
ಎಂಜಲನೆರಚುವ ಜಿಹ್ವೆಯಲಿ
    ಶ್ಲೇಷ್ಮವು ತುಂಬಿಹುದು !

ಕತ್ತನು ಕೊಯ್ಯುತಲಿರುವನು 'ತೋಡಿ'ಯ,
ಅಯ್ಯೋ! ನೋಡಲ್ಲಿ!
ಗತಿಯಿಂದುರುಳುತಲಿರುವುದು ವರ್ಣವು,
ಹಾ! ಹಾ! ನೋಡಿಲ್ಲಿ!
ಬಲು ಕೆಟ್ಟದು, ಆ ಗಂಟಲ ಉಗುಳು
ಅನ್ನವ ತಿಂದರೆ ಹೋಗದು ಅಗಳು!
ಕೆಂಗಣ್ಣು ಬೀರುತ ನೋಡಲ್ಲಿ
ಕುಂತಿರುವನು ನಡುರಂಗದಲಿ
ಸ್ವಾಮಿಯು, ಮುಡಿಗೆದರಿ!
'ಮಾಯಾ ಮಾನವ ಗೌಳ'ದ ರಾಗದಿ
ಹಾಡುವುದೇನವನು?
ಗೌರವವೇನಿದೆ? ಸಿಡಿಲಾಗಿರುವರು
ಸಭಿಕರು ರೋಷದಲಿ.
ತಾಳಕೆ ತೊಡೆಯನು
ಹೊಡೆಯುವ ಕೈಯನು
ಮೇಲೆತ್ತಿರುವನು ನೋಡಲ್ಲಿ
ಸುಮ್ಮನೆ ಇದ್ದರೆ ನಮ್ಮನು ಕೊಲ್ಲನೆ?
ಮುಂದಾಗುವುದನು ಕಾಣಲ್ಲಿ!
ಇದಾವ ನ್ಯಾಯ!
ಏನನ್ಯಾಯ್ಯ?
ಗಾನದ ಖೂನಿಯು ನೋಡಲ್ಲಿ!
ಏನನು ನೋಡುವೆ? ತಡೆಯುವೆ ಏಕೆ?
ಗಾನಸುಧಾರಸ ಹಿಂಗಲಿ ಬೇಕೆ?
ಯುವಕನೆ ತುಡುಕು 'ಮುಖಾರಿ'ಯನು
ಹೊಡೆ! 'ಕಾವೇರಿ'ಯನು,
ಎಳೆ, ಎಳೆ, 'ನೀಲಾಂಬರಿ'ಯ,
ಬಾ! ಕರೆ 'ಅಠಾಣ'ವನು!
ಕುಮಾರ ಸ್ವಾಮಿಯು ಹಾಡಿದನೆಂದರೆ
ಸಭೆಯಲಿ ಗುಡುಗೇ ಮೊಳಗುವುದು;
ಕೋಪವು ಕಣ್ಣಲಿ ಸಿಡಿವುದು; ಬಾಯಲಿ
ಶಾಪದ ಪದ ತುಳುಕಾಡುವುದು!
ಕಿವಿ ಪೆಚ್ಚಾಗುವುದು!
ಕಿಡಿ ಕಿಚ್ಚಾಗುವುದು!

—ಪಾಶಾಳಿ.

—o—

# ಅನರ್ಥಕೋಶ

ಊ—ಶಿಶುಸಾಹಿತ್ಯದ ಶಬ್ದ ವಿಶೇಷ. ಹುಣ್ಣು ಎಂಬ ಅರ್ಥವಿದ್ದರೂ ಇರಬಹುದು. ನಿಮ್ಮ ಶಿಶುವನ್ನೇ ವಿಚಾರಿಸಿ.

ಊಟ—ತೂತಿನ ಚೀಲವನ್ನು ತುಂಬುವ ಕೆಲಸ.

ಊರು—ಮೊತ್ತಮೊದಲು ಊರಿದ ಜಾಗ.

ಎಂಕ್ಟ—ವೇಂಕಟಂ ಎಂಬುದರ ತದ್ಭವ.

ಎಕ್ಕಡ—ಇವು ರಕ್ಷಿಸುವುದು ನಮ್ಮ ಪಾದಗಳನ್ನಲ್ಲ; ರಸ್ತೆಗಳನ್ನ.

ಎಕ್ಕಾ—ವ್ಯಾಪ್ಯಾನ್ನ ಭೋಜನಮಾಡುವ ಕುಸ್ತಿ ಪೈಲ್ವಾನರು.

ಎತ್ತು—"ಎತ್ತಿ ಕೊರಳಿನ ಮೇಲಿಟ್ಟರೆ ಎಳೆಯುತ್ತೇನೆ" ಎಂಬ ಪ್ರಾಣಿ. ಅದಕ್ಕಾಗಿ ಈ ಹೆಸರು ಬಂದಿದೆ.

ಎಣ್ಣೆ—ಪ್ರಾಚೀನ ಭಾರತದ ಸ್ವರ್ಣಯುಗದಲ್ಲಿ ಬಡವರೂ ಶ್ರೀಮಂತರೂ ನೀರಿಗೆ ಬದಲಾಗಿ ಇದನ್ನೇ ಸ್ನಾನಕ್ಕೆ ಉಪಯೋಗಿಸುತ್ತಿದ್ದರೆಂದು ಒಬ್ಬ ಆಂಗ್ಲ ಸಂಶೋಧಕನು ಬರೆದಿರುವನು. ಆದ್ದರಿಂದ ಅದು ನಿಜವಿರಬೇಕು.

ಎಮ್ಮೆ—ಅದರ ಮೈ ಕೆಸರಾದರೆ ನಮ್ಮ ಬಾಯಿಗೆ ಮೊಸರು!

ಎಸ್ಸಾರ್—ಕಾರಕೂನರ ಬೀಜಮಂತ್ರ

ಎಸ್ಸೆಸ್ಸೆಲ್‌ಸಿ—"ಓ ಜೋಸಿ, ಸಜೋಸಿ, ಬಲಮುಸಿ, ಭ್ರಾಜೋಸಿ, ಮುಂತಾದುವುಗಳಿಗೆ ಬದಲಾಗಿ ಆಧುನಿಕ ಋಷಿಗಳು ಮಾಡಿರುವ ವ್ಯವಸ್ಥೆ.

ಎಳನೀರು—ಬಾಲ್ಯದಲ್ಲಿ ಬೇರಿಗೆ ಬಿಟ್ಟ ನೀರು.

ಏಕಲವ್ಯ—ಹೆಬ್ಬೆಟ್ಟಿಲ್ಲದವ. ಬಂಗಾಲದ ನೆಯ್ಗೆಯವರನ್ನೂ ಹೊಯ್ಸಲ ಬಿಟ್ಟಿದೇವನನ್ನೂ ನೋಡಿ.

ಏರ್‌ಕ್ರಾಪ್ಟ್—"ಇಂದುಸ್ಥಾನ್ ಹೇರ್‌ಕ್ರಾಪ್ಟ್" ಎಂಬ ಕಂಪನಿಗೆ ಕೆಲವು ಕಾಲೇಜ್ ಹುಡುಗರು ಹೇಳುವ ಹೆಸರು.

ಏಳು—"ಹೇಳು" ಎಂಬುದರ ತದ್ಭವ. ಇದನ್ನೂ 'ಏಳ'ಲಾರದೆ, ಅಂಗಡಿಯಲ್ಲಿ ಅಳೆಯುವಾಗ 'ಮತ್ತೊಂದು' ಎನ್ನುತ್ತಾರೆ.

—ಬಾರಾಂತ.

# ಜಂಪರ್ ಜಮಾವಣೆ

"ನಾಲ್ಕು ಲಡಿ 'ವುಲ್' ಬೇಕು"

"ನಾಲ್ಕು ಅಡಿ ವುಲ್ ಏತಕ್ಕೇ—ಒಂದು ಅರಂಗುಲ ಟೇಪು ಕಟ್ಟಿಕೊಂಡರೆ ಜಡೆ ಚನ್ನಾಗಿ ಕಾಣುತ್ತೆ. ಇಷ್ಟಕ್ಕೂ ನಿನಗಿರೋ ಕೂದಲಿಗೆ ಜಡೆ ಚನ್ನಿಲ್ಲ. ಮುಗುಮ್ಮಾಗಿ ಹೆರಳು ಹಾಕಿಕೊ, ಟೇಪೂ ಉಳಿಯುತ್ತೇ, ಕುಂಡೂ ಮುಚ್ಚುತ್ತೆ

"ನಾಲ್ಕು ಲಡಿ ವುಲ್ ಎಂದೆ, ನಾಲ್ಕು ಅಡಿ ಎನ್ನಲಿಲ್ಲ. ಲಡಿ ಎಂದರೆ ಒಂದು ಗೊಂಚಲು ಎಂತ. ಜಡೆಗಲ್ಲಾ ಅದು ನಿಮಗೊಂದು ಮಗುವಿಗೊಂದು ಸ್ವೆಟ್ಟರ್ ನೆಯ್ಯೋಣ ಅಂತ. ಪಕ್ಕದಮನೆ ಔಟ್‌ಹೌಸಿಗೆ ಬಾಡಿಗೆಗೆ ಬಂದಿದ್ದಾರಲ್ಲ ಸುಮತಿಬಾಯಿ ಅವರು ಎಷ್ಟುಚೆನ್ನಾಗಿ ಸ್ವೆಟರ್ ಹಾಕುತ್ತಾರೆ ಅಂತ. ಇವತ್ತು ಮಧ್ಯಾಹ್ನ ನಮ್ಮನೆಗೆ ಬಂದಿದ್ದರು. ನನಗೂ ಹೇಳಿಕೊಡುತ್ತಾರಂತೆ. ಅವರ ಹತ್ತಿರವೇ ಎರಡು, ನೀಡಲ್ಲುಗಳೂ ಇವೆಯಂತೆ. ಅದನ್ನೂ ಕೊಡುತ್ತಾರಂತೆ. ಮಗುವಿಗೆ ಒಂದು ಜಂಪರ್‌ಹಾಕಿ ಮೊದಲು. ಆಮೇಲೆ ದೊಡ್ಡವರ ಜರ್ಸಿ ಹಾಕಬಹುದು ಎಂದರು. ನಾಲ್ಕು ಲಡಿ ಯಾವುದಾದರೂ ಮಾಸಲು ರಂಗಿನ ವುಲ್ ತಂದುಕೊಡಿ."

"ಬೆಳೆದ ಗಂಡನು ಅಂಗಡಿಗೆ ಹೋಗಿ ನಾಲ್ಕು ಲಡಿಕೊಡು ಎಂದರೆ ನಾಚಿಕೆಗೇಡು. ಅಲ್ಲದೆ ಅದೆಲ್ಲಿ ಸಿಗುತ್ತದೆಯೋ ಎಷ್ಟುಬೆಲೆಯೋ, ನನಗೊಂದೂ ಗೊತ್ತಿಲ್ಲ ನಿಮ್ಮ ಸುಮತೀಬಾಯಿ ಚಾಲೂಕಾಸಾಮಿ ಇದ್ದಹಾಗೆ ಇದೆ. ಆಕೆಗೆ ಹೇಳಿ ತರಿಸಿಕೋ ಸುಮಾರು ಎಷ್ಟಾಗಬಹುದು."

"ಒಂದೆರಡು ರೂಪಾಯಿ ಆಗಬಹುದು. ಅಷ್ಟೇ, ಹಾಗೇ ಮಾಡುತ್ತೇನೆ ಎರಡು ರೂಪಾಯಿ ಕೊಡಿ."

ಇಂತು ಗಂಡಹೆಂಡಿರ ಸಂಭಾಷಣೆಯೋಳ್ ಮೊದಲಾಧ್ಯಾಯಂ ಸಂಪೂರ್ಣಂ

✦ ✦ ✦

ಶನಿವಾರ ಜೇರ್ರೋ ಎಂದು ಮಳೆ ಬೀಳಲಾರಂಭಿಸಿತ್ತು. ಬೆಳಿಗ್ಗೆ ಹತ್ತು ಗಂಟೆಯಾದರೂ ಜಡಿಮಳೆ. ಛಳಿ ಛಳಿ. ಬಿಸಿ ಊಟವಾಯಿತು ಹುರಿಗಾಳಾಯಿತು ಕಾಫಿ ಆಯಿತು ಎಲೆಡಿಕೆ ಆಯಿತು ಕಛೇರಿಗೆ ಹೋಗಬೇಕು. ಇವತ್ತು ವುಲನ್ ಕಾಲ್ಚೀಲ ಹಾಕದೇ ಇದ್ದರೆ ಕಾಲು ತಣ್ಣಗಾಗುತ್ತೆ, ಎಂದು ಕಾಲ್ಚೀಲ ಹುಡುಕುಕ್ಕೆ ಶುರು. ಗೂಡೆಲ್ಲಾ ಹುಡುಕಿದ್ದಾಯಿತು, ಇಲ್ಲ. ಬೂಡ್ಸುಗಳೆಲ್ಲಾ ಹುಡುಕಿದ್ದಾಯಿತು ಇಲ್ಲ. ಕೊಠಡಿಯ ಮೂಲೆ ಮೂಲೆಗಳೆಲ್ಲಾ ಹುಡುಕಿದೆ ಇಲ್ಲ. ಕಡೆಗೆ ದೇವರಮನೆ ಕೂಡ ಹುಡುಕಿದೆ ಕಂಭ ಒರಸುಕ್ಕೆ ತೆಗೆದುಕೊಂಡಿದ್ದಾರೋ ಎಂದು ಅಲ್ಲೂ ಇಲ್ಲ. ಬಚ್ಚಲಬಾಯೆಲ್ಲಾ ಹುಡುಕಿದೆ. ಏನಾದರೂ ಹಾವು ಚೇಳು ಬರುತ್ತೆ

ಎಂದು ಬಚ್ಚಲಬಾಯಿಗೆ ತುರುಕಿದ್ದಾರೋ ಎಂದು, ಅಲ್ಲೂ ಇಲ್ಲ. ಎಲ್ಲೂ ಸಿಗಲಿಲ್ಲ. ಮನೆಯವರ ಮೇಲೆಲ್ಲಾ ರೇಗುತ್ತಾ, ಹತ್ತಿಯ ಕಾಲ್ಚೀಲ ಹಾಕ್ಕೊಂಡೇ, ಕಛೇರಿಗೆ ನಡುಗುತ್ತ ಹೊರಟೆ.

ಸಾಯಂಕಾಲ ಮನೆಗೆ ಬಂದೆ. ಶಿವಮುಗ್ಗೆಯಿಂದ ದುಗ್ಗಪ್ಪನು ಬಂದ. ದುಗ್ಗಪ್ಪನೂ ನಾನೂ ಹಳೆಯ ಸ್ನೇಹಿತರು. ವರ್ಷಕ್ಕೆ ಎರಡುವರ್ಷಕ್ಕೆ ನಮ್ಮೂರಿಗೆ ಬರುವದುಂಟು ಬಂದಾಗ ನಮ್ಮನೆಯಲ್ಲಿ ಇಳಿದುಕೊಂಡು, ರಾತ್ರಿ ಎರಡನೇ ಸಿನಿಮಾಗೆ ಹೋಗುವ ವಾಡಿಕೆ. ಆಮಾತು ಈಮಾತು ಆಡುತ್ತಾ, ಒಂದು ರಾತ್ರಿ ಕಳೆಯುವ ರೂಢಿ. ಎಂಟುಗಂಟೆಗೆ ಊಟಮಾಡಿದೆವು. ಸಿನಿಮಾಕ್ಕೆ ಹೊರಡಲು ಅಣಿಮಾಡಿಕೊಂಡೆವು. ಛಳಿ ಮರಟಮೇಲೆ ಮಫ್ಲರ್ ಹಾಕಿಕೊಂಡು ಅಂಗಿ ಹಾಕಿಕೊಳ್ಳೋಣ ಎಂದು ಮಫ್ಲರ್ ಹುಡುಕಲಾರಂಭ. ಎಲ್ಲೂ ಇಲ್ಲ. ಬಟ್ಟೆಯು ಗೂಟದಮೇಲೆ ಯಾವಾಗಲೂ ಇರುವ ಪದ್ಧತಿ. ಇವತ್ತು ಗೂಟ ಖಾಲಿ. ಟ್ರಂಕಿನಲ್ಲಿಲ್ಲ. ಕುರ್ಚಿಮೇಲಿಲ್ಲ. ಮೇಜಿನ ಕೆಳಗಿಲ್ಲ. ಕಾಲ್ಚೀಲದ ಹಿಂದೆಯೇ ಹೋಗಿ ಬಿಟ್ಟಿತ್ತು. ಮನೆತುಂಬಾ ಇಲಿಕಾಟ. ಇನ್ನುಮೇಲೆ ಮಕ್ಕಳ ಜತೆಗೆ ಒಂದು ಗಡವಾ ಬೆಕ್ಕನ್ನೂ ಸಾಕಬೇಕು ಎಂದಂದುಕೊಂಡು, ಅಂಗಿಹಾಕಿಕೊಂಡು ಶಾಲು ಹೊದ್ದುಕೊಂಡು ಸಿನಿಮಾಗೆ ಹೋಗಿ ಬಂದೆವು.

ದುಗ್ಗಪ್ಪನೂ ಮಾರನೆಯ ಸಾಯಂಕಾಲ ತನ್ನೂರಿಗೆ ಹೊರಟುಹೋದ.

✣ ✣ ✣

ನಾಲ್ಕೈರು ದಿವಸಗಳಾಯಿತು. ಒಂದು ಸಾಯಂಕಾಲ ಮನೆಗೆ ಸುಸ್ತಾಗಿ ಬರುತ್ತೇನೆ. ವರಾಂಡಾದಲ್ಲಿ ಮನೆಯಾಕೆ ಮಗುವನ್ನೆತ್ತಿಕೊಂಡು ಸ್ವಾಗತ ಬಯಸುವಂತೆ ನಿಂತಿದ್ದಾಳೆ. ಪುಸ್ತಕದಲ್ಲಿ ಹೇಳುವಂತೆ ಪತಿರಾಯನು ಬರುವವೇಳೆಗೆ ನಗುನಗುತ ಬಾಗಿಲಲಿ ಎದುರ್ಗೊಂಡು ಕಾಲಿಗೆ ನೀರಂಕೊಟ್ಟು, ಬೂಟ್ಸಂ ಬಿಚ್ಚಿಟ್ಟು, ಕೆನಾವಲ ಕಾಫಿಯಂ, ಗರಿಗರಿಯ ಮುರುಕುಗಳಂ ತಿನಲಿಕ್ಕೆ ಇತ್ತು, ಇತ್ಯಾದಿ ಎಂದೂ ನನಗೆ ಅನುಭವವಿಲ್ಲ. ಮನೆಗೆ ಬಂದು ಲೇ ಲೇ ಎಂದು ನಾಲ್ಕುಸಾರಿ ಬಾಗಿಲೊಡೆಯುವಂತೆ ಶಬ್ದಮಾಡಿದ ಮರುಗಂಟೆಯಲ್ಲಿಯೇ ಅಡಿಗೇಮನೆಯಿಂದ ಬಂದೇ ಎಂದು ಮಾರ್ದನಿ ಬಂದು, ಕತ್ತಲಾಗುವ ಮುಂಚೆಯೇ ಮನೆಯಾಕೆಯು ಬಂದು ಬಾಗಿಲತೆಗೆದು ಕೂಗಬಾರದಾಗಿತ್ತೇ ಈ ಹಾಳುಮನೇಲಿ ಅಡಿಗೆಗೆ ಹೋದರೆ ಬಂದವರು ಹೋದವರ ಸುಳಿವೇ ಗೊತ್ತಾಗುವುದಿಲ್ಲ, ಎಂದನ್ನಿಸಿಕೊಳ್ಳುವುದು ವಾಡಿಕೆ ಅಂತಹದುರಲ್ಲಿ ಆಕೆಯೇ ತಲೆಬಾಚಿಕೊಂಡು, ಮಗುವಿಗೆ ಮೈತುಂಬಾ ಬಟ್ಟೆಹಾಕಿ, ಅದೂ ಕೈ ಮಗುವಿಗೆ ಬಟ್ಟೆಹಾಕಿ, ಬೀದಿಬಾಗಿಲು ತೆಗೆದು ನಗುನಗುತಾ ನಿಂತಿದ್ದರೆ ನನಗೆ ಯಾಕೋ ಗುಮಾನಿ.

'ಯಾಕೇ ಎಲ್ಲರೂ ಸ್ವಸ್ಥವಾಗಿದ್ದಾರೆಯೇ, ಇದೇನಿದು ನಗುತ ನಗುತ ನಿಂತಿರುವೆ' ಎಂದೆ.

' ಇದೇನು ಹೀಗೆ ಕೇಳುತ್ತೀರಿ, ಎಂದು ಅಳುತ್ತಾ ಇದ್ದಿದ್ದು ನಾನು ' ಎಂದಳು.

' ಅಲ್ಲಾ, ಅಳುತ್ತಾ ಇರುವುದಿಲ್ಲ ಆದರೆ ಮುಖ ಮಾತ್ರ ಒಂದು ತರಹ ಎಣ್ಣೆ ಕುಡಿದವರ ಹಾಗಿರುವುದು ಸಾಮಾನ್ಯ, ಇವತ್ತೇನು, ನಿಮ್ಮ ತಂದೆ ಏನಾದರೂ ಊರಿಗೆ ಬರುತ್ತಾರೋ ' ಎಂದೆ

" ನಮ್ಮ ತಂದೆ ಊರಿಗೆ ಬಂದರೇನು ನನಗೆ ಕನ್ನಡಿ ಕಲಶ. ಯಾವಾಗಲೂ ಹೀಗೆ ನೀವು ಕುಹಕ. ಎಷ್ಟೋ ಕಷ್ಟಪಟ್ಟು ಒಂದು ನಿಕ್ಕರ್ ಒಂದು ಜಂಪರ್ ಹಾಕಿ ಮಗುವಿಗೆ ತೊಡಿಸಿ ನೋಡಿ ಸಂತೋಷಪಡಲಿ ಎಂದು ಎತ್ತುಕೊಂಡು ನಿಂತಿದ್ದರೆ ಅದರಮೇಲೆ ಕಣ್ಣೇ ಇಲ್ಲ. ನಾನು ಯಾಕೇ ನಗುತ್ತಿದ್ದೀನಿ ಎಂದು ಗಾಬರಿಯಾಗಿ ಕೇಳುತ್ತೀರಿ. ಮಗುವಿಗೆ ಎಷ್ಟು ಚೆನ್ನಾಗಿ ಒಪ್ಪುತ್ತೆ. "

ನೋಡಿದೆ ಮಗುವಿಗೆ ವುಲನ್ ದಾರದಲ್ಲಿ ಮನೆಯಲ್ಲೇ ನೆಯ್ದ ಪೋಷಾಕು ಮಾಸಲು ಬೂದಿಯ ಜಂಪರ್. ಮಾಸಲು ಕಪ್ಪಿನ ನಿಕ್ಕರ್. ತಕ್ಕಮಟ್ಟಿಗೆ ನೋಡುವ ಹಾಗಿತ್ತು.

' ಇದಕ್ಕೆಷ್ಟಾಗುತ್ತೆ ಅಂದರೆ '

' ಸುಮಾರು ಎರಡು ರೂಪಾಯಿ ಕೊಟ್ಟರೆ ಅಂಗಡಿಯಲ್ಲಿ ಸಿಗುತ್ತೆ. ' ಎಷ್ಟು ವುಲ್ ಲಡಿ ಕೊಂಡುಕೊಂಡೆ ಇದಕ್ಕೆ.

' ನೀವುಕೊಟ್ಟ ಎರಡು ರೂಪಾಯಿಗೆ ದಾರ ತಂದಿದೆ. ಸಾಲಲಿಲ್ಲ. ಮನೆ ಯಲ್ಲಿದ್ದ ಹರಕಲು ಪರಕಲು ದಾರ ಸೇರಿಸಿ ನಾನೇ ನೆಯ್ದೆ. '

' ಈ ಬಣ್ಣ ಎಲ್ಲಿಯೋ ನೋಡಿದ ಹಾಗಿದೆಯಲ್ಲ ಎಂದುಕೊಂಡೆ. ಹಾಗೆಯೇ ಜ್ಞಾಪಿಸಿಕೊಂಡರೆ—ಥಟ್ಟನೆ ಹೊಳೆಯಿತು—ಶಾಲ್ಜೇಲ ಮಫ್ಲರು—

' ಏನೇ ' ಎಂದೆ

' ಹಾ ' ಎಂದಳು.

' ಶಾಲ್ಜೇಲ, ಮಫ್ಲರು ' ಎಂದೆ

' ಯಾವ ಶಾಲ್ಜೇಲ ' ಎಂದಳು

' ನಿಮ್ಮತಂದೆ ವರಪೂಜೇಲಿ ನನಗೆಕೊಟ್ಟದ್ದು ಪಾದರಕ್ಷೆಯ ಜತೆಯಲ್ಲಿ' ಎಂದೆ.

' ಏನು ಅದಕ್ಕೆ ' ಎಂದು ತಿಳಿಯದವಳಂತೆ ಕೇಳಿದಳು.

' ಈ ಜಂಪರೂ ಅದೇ ಬಣ್ಣ '

' ಅಯ್ಯೋ ಆ ಹರಿದುಹೋದ ಶಾಲ್ಜೇಲವೇ. ತುದಿಯೆಲ್ಲಾ ಜಿಂಪಿಯಾದ ಮಫ್ಲರೇ—ಅದೆಲ್ಲೋ ಬಿದ್ದಿತ್ತು ಅದರ ದಾರವನ್ನೇ ಉಪಯೋಗಿಸಿಕೊಂಡೆ '

ಬೇರೆ ಕಾಲ್ಪೀಲ ಕೊಂಡುಕೊಂಡರೆ ಈಗ ನಾಲ್ಕು ರೂಪಾಯಿ. ಮಫ್ಲರು ತೆಗೆದರೆ ಆರು ರೂಪಾಯಿ. ಒಟ್ಟು ಮಗುವಿಗೆ ಒಂದು ಜಂಪರ್ ಒಂದು ನಿಕ್ಕರಿಗೆ ಹನ್ನೆರಡು ರೂಪಾಯಿ ಎಂದು ಅವಳಿಗೆ ಕೇಳಿಸುವಹಾಗೆ ಗಟ್ಟಿಯಾಗಿ ಲೆಕ್ಕಮಾಡಿದೆ.

ಅವಳ ಮುಖ ಎಂದಿನಂತೆ ಹರಳೆಣ್ಣೆ ಖಳೆಯನ್ನು ತಿರುಗಿ ಪಡೆಯಿತು. ನಾನು ಏನುಮಾಡಿದರೂ ಹೀಗೆ ನೀವು ಎಷ್ಟೋ ಮಿಗಿಸೋಣ ಎಂದು ನಾನು ಕಣ್ಣಲ್ಲಿ ಕಣ್ಣಿಟ್ಟುಕೊಂಡು ಕಂಡವರನ್ನು ಕೇಳಿಕೊಂಡು ಕಸೂತಿ ಹಾಕಿದರೆ, ಈ ಬೈಗಳು ಬೇರೆ ಎಂದು ಮುನಿಸಿಕೊಂಡು ಅಡಿಗೆ ಮನೆಗೆ ಹೊರಟಳು.

ಯಾಕೆ ಹೇಳುಕ್ಕೆ ಬಂದರೆ ಎಂದರೆ, ನೀವೂ ಹುಷಾರಾಗಿರಿ ಮನೆಯಲ್ಲೇನಾದರೂ ನಿಟ್ಟಿಂಗ್ ಕಲಿಯುತ್ತೇನೆ ಕಸೂತಿ ಹಾಕುತ್ತೇನೆ ಎಂದರೆ, ಧೃಢವಾಗಿ 'ಉಹು' ಎಂದು ಬಿಡಿ. ಇಲ್ಲದಿದ್ದರೆ ನೋಡಿ ಒಂದಲ್ಲ ಒಂದುದಿನ ನಿಮ್ಮ ತಲೆಯ ಕೂದಲನ್ನೂ ಹಾಗೆಯೇ ಕತ್ತರಿಸಿ ಜಂಪರ್ ಹಾಕಿಯೇ ಬಿಡುತ್ತಾರೆ.

---

"ಬೆಂಗಳೂರು ಬೀದಿಯಲ್ಲಿ ಸತ್ತ ಒಬ್ಬ ಭಿಕ್ಷುಕನ ಹತ್ತಿರ 99 ರೂಪಾಯಿ ನೋಟುಗಳೂ ಕೊಂಚ ಚಿಲ್ಲರೆಯೂ ಇತ್ತಂತೆ." ನೂರು ರೂಪಾಯಿ ನೋಟು ತೋರಿಸಿ ಚಿಲ್ಲರೆ ಕೊಡು ಎಂದು ಕೇಳುವವರಿಗಾಗಿ ಇಟ್ಟಿದ್ದನೋ ಏನೋ?

* * *

"ಇಡೀ ಬೆಂಗಳೂರು ಮಾರ್ಕೆಟ್ಟನ್ನೇ ಎತ್ತಿಟ್ಟರೂ ಅದನ್ನು ಹೊತ್ತು ಸುಖ ಪ್ರಯಾಣಮಾಡುವ ಭಾರಿ ಹಡಗುಗಳು ನೂರಾರಿವೆ!" (ಪತ್ರಿಕೆ) ದಯವಿಟ್ಟು ಅಠಾರಾಕಚೇರಿಯನ್ನೇ ಮೊದಲು ಸಾಗಿಸಲಿ!....

* * *

"ಲೋ! ನೀನು ಜಾಣ! ನಮ್ಮಮನೆ ಲಲಿತೂನ ಮದುವೆಮಾಡಿಕೊಳ್ಳುತ್ತೀಯೋನೋ?"

* * *

"ಹೌದು! ನಾನು ಜಾಣ! ನಿಮ್ಮಮನೆ ಲಲಿತೂನ ಮದುವೆಮಾಡಿಕೊಳ್ಳೋದಿಲ್ಲ!"

* * *

# ಆಸನಾಸೀನ

---

ಮಧ್ಯಾಹ್ನ ಸುಮಾರು ಮೂರುಗಂಟೆ. ಕಛೇರಿಯಲ್ಲಿ ಕುಳಿತು ಬರೆದೂ ಬರೆದೂ ಸೊಂಟ ಹಿಡಿದುಕೊಂಡುಬಿಡ್ತು. ರೆಕಾರ್ಡು ರೂಮಿಗೆ ಹೋಗಿ ಒಂದು ಐದು ನಿಮಿಷ ನೆಲದಮೇಲೆ ಮಲಗಿದರೆ ನೋವು ಕಡಿಮೆಯಾಗಬಹುದೆಂದು ಅಲ್ಲಿಗೆ ಹೋಗಿ ಯಾರಿಗೂಕಾಣದ ಒಂದು ಮೂಲೆಯಲ್ಲಿ ಎರಡು ದಫ್ತರವನ್ನೇ ತಲೆದಿಂಬು ಮಾಡಿಕೊಂಡು ಮಲಗಿದೆ. ಹಾಗೆಯೇ ನಿದ್ರೆ ಹತ್ತಿದ್ದಿರಬೇಕು. ಯಾರೋ ಬಂದು ಎಬ್ಬಿಸಿದಂತಾಯಿತು. ಎಚ್ಚತ್ತೆ. ಕುಳಿತೆ. ಎದುರಿಗೇ ನಮ್ಮ ಚಿಕ್ಕಸಾಹೇಬರು· ಏನ್ರೀ ಇದೇ ಮಲಗುವ ಮನೆಯೋ ಎಂದರು " ಸರ್ವನಾಶೇ ಸಮುತ್ಪನ್ನೇ ಸತ್ಯಂ ವದತಿ ಕಿಂಕರಃ". ನನ್ನ ಟೊಂಕನೋವು, ಅದಕ್ಕೆ ತಕ್ಕಮದ್ದು ಎಲ್ಲವನ್ನೂ ಹೇಳಿದೆ. ಚಿಕ್ಕಸಾಹೇಬರೂ ನಾಲ್ವತ್ತಕ್ಕೆ ಮೀರಿದ ಯೌವನಸ್ಥರು. ಆಯಕಟ್ಟು ಸ್ವಲ್ಪ ನನ್ನಂತೆಯೇ ಹೊಟ್ಟೆಯಸುತ್ತ ಹೆಚ್ಚಳತೆ. ಮೂರುಸಾರಿ ಕೆಮ್ಮಿದರೆ ದಮ್ಮುಬರುವ ಜಾತಿಯವರು. ನನ್ನ ಕಷ್ಟವನ್ನು ಕೇಳಿ ಬಹಳವಾಗಿ ಪಶ್ಚಾತ್ತಾಪಪಟ್ಟರು. ಹಾಗೂ ಜೋರಾಗಿ ನಡೆದರೆ ಉಬ್ಬಸ ಬರುತ್ತದೆಯೋ ಎಂದರು. ಬಿಸಿಲಿನಲ್ಲಿ ಬೆವರುತ್ತದೆಯೋ ಎಂದರು. ಊಟವಾದಮೇಲೆ ಎದೆ ಒತ್ತುತ್ತದೆಯೋ ಎಂದರು. ತೇಗು ಬರುತ್ತದೆಯೋ ಎಂದರು. ನಾನು ಸ್ವಾಭಾವಿಕವಾಗಿ ಮುಚ್ಚುಮರೆ ಇಲ್ಲದೆ ಹೊಟ್ಟೆ ತುಂಬಾ ಉಣ್ಣುವವನು. ತೇಗು ಬಂದರೇ ತೃಪ್ತಿ—ತೇಗೆ ಹೊಟ್ಟೆ ತುಂಬಿದುದಕ್ಕೆ ಸೂಚನೆ ಎಂದು ತಿಳಿದವನು. ಬಿಸಿಲಿನಲ್ಲಿ ಬೆವರುವುದೂ ಉಂಟು. ಬಸ್ಸಿಗೆ ಜೋರಾಗಿ ನಡೆದರೆ ದಮ್ಮು ಬರುವುದೂ ಉಂಟು. ಚಿಕ್ಕ ಸಾಹೇಬರು ಕೇಳಿದಾಗ ಎಲ್ಲದಕ್ಕೂ ಹೂ ಎಂದೆ. ಹಾಗೆ ಹೇಳುವಾಗಲೇ ಏನೋ ಖಾಯಿಲೆಯ ಸೂಚನೆ ಗಳಿವು ಎಂದು ತೋರಿಬಂತು.

ಸಾಹೇಬರು ಸಂತುಷ್ಟಿಯಿಂದ ನಕ್ಕರು. ನಗುತ್ತಾ ಹೇಳಿದರು ನನಗೂ ಹೀಗೆಯೇ ಆಗಿತ್ತು, ಎರಡು ವರ್ಷದಕೆಳಗೆ. ಕೊಬ್ಬು ಜಾಸ್ತಿಯಾಗಿ ಎಲ್ಲಿ ಬೇಡವೋ ಅಲ್ಲೆಲ್ಲಾ ತುಂಬಿಕೊಳ್ಳುತ್ತದೆ. ಹಾಗೂ ಹೃದಯದ ಸುತ್ತಲೂ ತುಂಬಿಕೊಳ್ಳುತ್ತದೆ. ಒಂದಲ್ಲಾ ಒಂದುದಿನ ಲಬ್ ಡಬ್ ಎನ್ನುವುದು ಲಸ್ ಡಸ್ ಎನ್ನುತ್ತದೆ. ಅಲ್ಲಿಗೆ ಮುಗಿಯಿತು. ಈಗಲೇ ಹುಷಾರಾಗಿರಿ. ಈ ಟೊಂಕನೋವು ಮೊದಲ ಸೂಚನೆ. ಆಸನಗಳನ್ನು ಹಾಕುವುದನ್ನು ಕಲಿಯಿರಿ ಈ ಹೆಚ್ಚು ಕೊಬ್ಬೆಲ್ಲಾ ಕರಗಿ ನೀರಾಗಿ ಜಿಂಕೆಯಂತೆ ದೇಹ ಚಿಮ್ಮುತ್ತದೆ. ಹೃದಯ ಪರಿವರ್ತನೆಯಾಗುತ್ತದೆ ಎಂದರು. ಆಸನಗಳನ್ನು ಹಾಕುವ ಒಂದು ಪುಸ್ತಕವನ್ನೂ ಸೂಚಿಸಿದರು. ಇವರು ಹೇಳಿದ ಕೂಡಲೆ ಹೃದಯವು ಪರಿವರ್ತನೆಯಾಯಿತು. ಲಬ್ ಡಬ್ ಎಂದು ಹೊಡೆದು ಕೊಳ್ಳುವ ಹೃದಯ ಒಮ್ಮೊಮ್ಮೆ ಲಬೋಲಬೋ ಎಂದಂತಾಯಿತು. ಒಮ್ಮೆ ಒಂದು ಗಳಿಗೆ ನಿಂತೇಹೋಯಿತು. ನನ್ನಾಟ ಆಯಿತು ವಿಮಾ ಕಂಪನಿ ಮುಳುಗಿತು ಎನ್ನುವ

ವೇಳೆಗೆ ಲಬ್‌ಲಬ್ ಎಂದಿತು, ಡಬ್ ಡಬ್ ಎಂದೂ ಅಂದಿತು. ಓಹೋ ಏನೋ ಬಂತು ನನಗೆ ಈ ವೈದ್ಯರ ಹತ್ತಿರ ಹೋಗಿ ಅವರ ಹೊಟ್ಟೆತುಂಬುವುದರ ಬದಲು ಈ ಪುಸ್ತಕ ತೆಗೆದುಕೊಂಡು, ಆ ಪ್ರಕಾಶಕನಿಗಾದರೂ ಒಂದು ತುತ್ತು ಅನ್ನ ಕೊಡೋಣ ಎಂದು ಆಸನ ವಿಧಾನದ ಪುಸ್ತಕವನ್ನು ಕೊಂಡು ತಂದೆ.

ಬೆಳಗ್ಗೆ ಏಳುತ್ತಲೂ ಆಸನಗಳನ್ನು ಪುಸ್ತಕ ನೋಡಿಕೊಂಡು ಹಾಕಲು ಆರಂಭಮಾಡಿದೆ. ಪದ್ಮಾಸನ, ಕುಕ್ಕುಟಾಸನ, ಮತ್ಸ್ಯಾಸನ, ಸಿಂಹಾಸನ, ಗಜಾಸನ ಎಲ್ಲವನ್ನೂ ಹಾಕಿದೆ ಸುಲಭವಾಗಿಯೇ ಕಂಡಿತು. ಇದರಿಂದ ಕೊಬ್ಬು ಕರಗಿ ಸೊಂಟ ಸಡಿಲವಾಗುವುದಾದರೆ ಒಳ್ಳೆಯದೇ ಆಯಿತು ಎಂದು ಮುಂದಿನ ಪಾಠಗಳನ್ನೂ ಅಭ್ಯಸಿಸ ಹೊರಟೆ.

ಒಂದು ಆಸನದ ರೀತಿಯನ್ನು ಚನ್ನಾಗಿ ವಿವರಿಸಿದ್ದ. ಅದನ್ನು ಹಾಕಲು ಯತ್ನಿಸಿದೆ. ಪದ್ಮಾಸನದಲ್ಲಿ ಕುಳಿತುಕೊಂಡೆ. ಬಲಗಾಲುಂಗುಷ್ಟವನ್ನು ಬಲಗೈಯಲ್ಲಿ ಹಿಡಿದು, ಕಾಲನ್ನೆತ್ತಿ ಕತ್ತಿನ ಹಿಂದೆ ಹಾಕು ಎಂದಿತ್ತು. ಒಂದು ಬೊಂಬೆಯೂ ಇತ್ತು. ಹಾಗೆಯೇ ಮಾಡಿದೆ. ಎಡಗಾಲನ್ನೂ ಅದೇರೀತಿ ಮಾಡು ಎಂದಿತ್ತು ಅದನ್ನೂ ಅದೇರೀತಿ ಮಾಡಿದೆ. ಮೊದಮೊದಲು ಕಾಲು ಕತ್ತಿನಹಿಂದೆ ಹೋಗಲೊಲ್ಲದು. ನಾನು ಬಿಡಲೊಲ್ಲೆ. ಕಡೆಗೂ ಪ್ರಯಾಸಪಟ್ಟು ಕತ್ತಿನ ಹಿಂದಕ್ಕೆ ದೂಡಿದೆ. ಹೀಗೆಮಾಡುವಾಗ ಎರಡೂ ಕೈಗಳ ಸಹಾಯ ತೆಗೆದುಕೊಂಡೆ. ಹಾಗಾಗಿ ಎರಡೂ ಕೈಗಳೂ ಕಾಲಿನ ಕೆಳಗೆ ಕತ್ತಿನಮೇಲೆ ಸಿಕ್ಕಿಹಾಕಿಕೊಂಡುವು.

ಪುಸ್ತಕವನ್ನು ನೋಡುತ್ತೇನೆ. ಎರಡು ಕೈಗಳನ್ನೂ ನೆಲದಮೇಲಿಟ್ಟು ದೇಹದ ಭಾರವನ್ನು ಕೈಗಳಮೇಲೆ ಬಿಡು ಎಂದಿತ್ತು.

ಎರಡೂ ಕೈಗಳನ್ನು ಬಿಡಿಸಿಕೊಳ್ಳಲೇ ಆಗದು. ಒಂದು ನಿಮಿಷ, ಎರಡು ನಿಮಿಷ ಆಯಿತು. ಕಾಲುಗಳು ನೋಯಲಾರಂಭಿಸಿತು ಕತ್ತು ಮುರಿಯುವಂತೆ ಆಯಿತು. ಕಡೆಗೆ ನೋವು ಹೆಚ್ಚಾಯಿತು ಬಾಯಿ ಬಡಿದುಕೊಳ್ಳುವಷ್ಟು ನೋವಾಯಿತು. ಆದರೆ ಬಾಯಿ ಬಡಿದುಕೊಳ್ಳುವುದಕ್ಕೂ ಕೈಗಳು ಬೇಕಲ್ಲ. ಅವೇ ಇಲ್ಲ. ತಡೆಯಲಾರದೆ ಲಬೋ ಲಬೋ ಎಂದೆ. ಒಳಗಿನಿಂದ ಹೆಂಡತಿಯು ಬಂದಳು. ಬಂದವಳೇ ನಗಲಾರಂಭಿಸಿದಳು. ಇದೇನು ಈ ವಯಸ್ಸಿನಲ್ಲಿ ಈ ಹುಡುಗಾಟ ಎಂದಳು. ಕಾಲು ಸಿಕ್ಕಿಹಾಕಿಕೊಂಡಿದೆ ಬಿಡಿಸು ಎಂದೆ. ಅವಳೂ ಕೈಹಾಕಿ ಕಾಲು ಬಿಡಿಸಲೆತ್ನಿಸಿದಳು. ಆಗಲಿಲ್ಲ. ಜೋರಾಗಿ ಎಳೆದಳು ಕೈಜಾರಿತು ದೊಪ್ಪನೆ ಮೂಲೆಯಲ್ಲಿ ಬಿದ್ದಳು. ನಿಮ್ಮ ಟೊಂಕನೋವು ಹಾಗಿರಲಿ ನನಗೆ ಬಂತು ಈಗ ಎಂದು ರೇಗುತ್ತಾ ಎದ್ದಳು. ಮರಳಿ ಯತ್ನವ ಮಾಡಿದಳು ಆದರೆ ಪ್ರಯೋಜನವಿಲ್ಲ. ನನಗೋ ಹೀಗೆಯೇ ಸತ್ತುಹೋದರೆ ಹೆಣ ಹೊರುಕ್ಕೆ ಬಂದವರೂ ನನ್ನ ನೋಡಿ ನಗುತ್ತಾರಲ್ಲಾ ಎಂದು ಭಯ. ಏನಾದರೂ ಮಾಡೆ ಎಂದು ಕೂಗಿದೆ.

ಚಿಕ್ಕ ಸಾಹೇಬರಿಗೆ ಹೇಳಿ ಕಳುಹಿಸಿ, ಅವರಿಗೆ ಇದೆಲ್ಲಾ ಬರುತ್ತೆ ಎಂದೆ. ಬೇಗ ಬೇಗ ಮಗನನ್ನು ಚಿಕ್ಕ ಸಾಹೇಬರ ಮನೆಗೆ ಕಳಿಸಿದಳು. ಅವರೂ ಬೇಗ ಬೇಗ ಬಂದರು. ನಗುತ್ತಾನಿಂದರು ಕಾಲುಕೆಳಗೆ ಕೈಹಾಕಬಾರದು ಎಂದರು. ಇದಕ್ಕೆ ಪ್ರಾಯಶ್ಚಿತ್ತವೇ ಇಲ್ಲ ಎಂದರು. ಹಿಮಾಲಯದಲ್ಲಿ ಒಬ್ಬ ಗೋಸಾಯಿ ಹೀಗೆಯೇ ಮಾಡಿ ಲಯವಾದನು ಎಂದು ಧೈರ್ಯಕೊಟ್ಟರು. ನನಗೂ ಲಯವಾಗುವ ಕಾಲ ಬಂದಂತೆಯೇ ಕಂಡಿತು. ಕಡೆಗೆ ವೈದ್ಯರನ್ನು ಕರೆಸೋಣ ಅವರೇನಾದರೂ ಮಾಡಿಯಾರು ಎಂದರು. ವೈದ್ಯರೂ ಬಂದರು. ಅವರೂ ನೋಡಿದರು ಇದು ಪೈಲ್ವಾನರ ಕೆಲಸ ನನ್ನದಲ್ಲ. ಸಾಯುವ ಹಾಗಾದರೆ ಹೇಳಿ ಕಳುಹಿಸಿ. ಆಗಬಂದು ಇಂಜಕ್ಷನ್ ಕೊಡುತ್ತೇನೆ ಎಂದರು ಇನ್‌ಜಕ್ಷನ್ನಿಲ್ಲದೇ ಸಾಯುತ್ತೇನೆ ಏನುಬೇಡ ಹೋಗಿರಿ ಎಂದು ಅವರಮೇಲೆ ರೇಗಿ ಕಳಿಸಿದೆ. ಆವೇಳೆಗೆ ಪೈಲ್ವಾನನಿಗೆ ನಮ್ಮಾಕೆ ಹೇಳಿಕಳಿಸಿದ್ದಳು. ಆತನೂ ಜಗ್ಗುಹಾಕುತ್ತ ಬಂದ. ಒಂದು ಕಾಲು ಹಿಡಿದು ಜಗ್ಗಿದ ಅವನಿಗೆ ಕಾಲು ಜಗ್ಗಲಿಲ್ಲ. ಅಯ್ಯೋ ದೇವ ಎಂದೆಂದು ಇನ್ನೊಮ್ಮೆ ಜಗ್ಗಿದ ಲಟ ಲಟ ಶಬ್ದವಾಯಿತು. ಹೋಯಿತು ನನ್ನ ಕಾಲು ಎಂದೆಂದುಕೊಂಡೆ ಆದರೆ ಅವನು ಅಯ್ಯಯ್ಯೋ ಎಂದು ಹೊಡೆದುಕೊಳ್ಳಲಾರಂಭಿಸಿದ ಅವನ ತೋಳು ಲಟಲಟವಾಗಿತ್ತು. ಇದು ನನ್ನಿಂದಾಗದು ನಮ್ಮ ಗುರುಗಳಿಗೆ ಕರೆಕಳುಹಿಸಿ ಎಂದ. ಗುರುಗಳು ಬಂದರು. ಗುರುಗಳು ಆ ಪ್ರಾಂತ್ಯಕ್ಕೇ ಪ್ರಸಿದ್ಧಿ, ಉಸ್ತಾದ್ ಹಮಾನ್‌ಖಾನ್ ಎಂದರೆ ಜಟ್ಟಿಗಳೆಲ್ಲರೂ ಮುಗ್ಗರಿಸುತ್ತಿದ್ದರು. ಆತ ಬಂದ, ಮಣ್ಣು ಕೈಗೆ ಬಳಿದುಕೊಂಡ, ನನ್ನ ಕಾಲುಹಿಡಿದು ಸೀಬೇಕಾಯಿ ಮರದಿಂದ ಕೀಳುವ ಹಾಗೆ ಕತ್ತಿನ ಹಿಂದಿನಿಂದ ಕಿತ್ತ. ಒಂದು ಕಾಲು ನೆಲದ ಮೇಲೆ ಬಿತ್ತು, ಕೈ ಸಡಿಲವಾಯಿತು. ಇನ್ನೊಂದು ಕಾಲನ್ನೂ ಕಿತ್ತ, ಅದೂ ಬಿತ್ತು ನೆಲದಮೇಲೆ.

ನನಗೆ ಕಾಲು ಇದ್ದಂತೆಯೇ ತೋರಲಿಲ್ಲ ಕತ್ತು ಮಾತ್ರ ನೋಯುತ್ತಲೇ ಇತ್ತು. ಕತ್ತಿಗೆ ಮೂರು ದಿನ ತೈಲಹಾಕಿ ತಿಕ್ಕಿದರೆ ಸರಿಹೋಗುತ್ತೆ ಎಂದ. ಹಾಗೆಯೇ ಮೂರು ದಿನ ತಿಕ್ಕಿದ ಈಗ ಕತ್ತು ಸರಿಹೋಯ್ತು.

ಕಾಲೂ ಕಾಲಾಗಿದೆ. ಆದರೆ, ಆ ಸೊಂಟನೋವು ಮಾತ್ರ ಹೋಗಲಿಲ್ಲ. ಮಧ್ಯಾಹ್ನ ಮೂರು ಗಂಟೆ ಆದರೆ ರೆಕಾರ್ಡು ರೂಮೇ ಬಾ ಎನ್ನುತ್ತದೆ.

—o—

# ಈ ಟೆಲಿಫೋನಿರುವುದು

"ಎಷ್ಟು ಅನುಕೂಲ ಅಂತೀಯಾ, ಈ ಟೆಲಿಫೋನಿರುವುದು! ಈಗನೋಡು ನೀನು ಬಂದಿದೀಯೆ—ಮಲ್ಲೇಶ್ವರಕ್ಕೆ ಸಮಾಚಾರ ಕಳುಹಿಸಬೇಕು ಎಂದು. ನೀನೇ ಅಲ್ಲಿಗೆ ಹೋಗಿಬರಬೇಕಾದರೆ ಎರಡು ಗಂಟೆಕಾಲ ವ್ಯರ್ಥ. ಐದುವ್ಮೈಲಿ ಈ ಮೂಲೆಯಿಂದ ಆ ಮೂಲೆಗೆ ಬಸ್ಸಿನಲ್ಲಿ ಹೋದರೋ ಅಲ್ಲಿಕಾದು, ಇಲ್ಲಿಕಾದು ಬೆಳಿಗ್ಗೆ ಹೊರಟವನು ಸಾಯಂಕಾಲ ಸೇರಬಹುದು—ಬಸ್ಸು ದಾರಿಯಲ್ಲೇ ಸುಸ್ತಾಗಿ ನಿಂತು ಬಿಡದಿದ್ದರೆ! ಈಗಲೋ ಒಂದು ನಿಮಿಷದಲ್ಲಿ ನಿನ್ನ ಕೆಲಸ ಮುಗಿಸಿಬಿಡಬಹುದು.... ನಿನಗೆ ಬೇಕಾದ ನಂಬರೇನು? ೩೯೨೦? (ಟೆಲಿಫೋನಿನ ಚಕ್ರವನ್ನು ತಿರುಗಿಸುತ್ತಾ) 'ಹಲೋ! ಹಲೋ!'—ಬರೀ ಸಿಳ್ಳು ಕೇಳಿಸುತ್ತದೆ—ಲೈನ್ ಎಂಗೇಜ್ಡ್ (Line engaged) ಆಗಿದೆ. ಸ್ವಲ್ಪತಾಳು, ಎರಡು ನಿಮಿಷ ಬಿಟ್ಟು ಮತ್ತೆ ತಿರುಗಿಸಿನೋಡೋಣ....ಅಂತೂ ಇದರ ಉಪಯೋಗ ಇಷ್ಟು ಎಂದು ಹೇಳುವುದಕ್ಕಾಗುವುದಿಲ್ಲ, ನೋಡು....

ತಿರುಗಿ ನೋಡೋಣವೆ?.... 'ಹಲೋ! ಯಾರು ಮಾತನಾಡುವುದು? ಎಲ್ಲಿಂದಲೆ? ಇದು ಬಸವನಗುಡಿಯಿಂದ. ಅಲ್ಲಿ ಯಾರು ಮಾತನಾಡುವುದು?.... ಸ್ವಲ್ಪ ಸ್ಪಷ್ಟವಾಗಿ ಮಾತನಾಡ್ರೀ!.... ಸ್ಪಷ್ಟವಾಗಿ—ಗಟ್ಟಿಯಾಗಲ್ಲ! ಯಾರು? ಕೃಷ್ಣಪ್ಪನೆ?' (ಟೆಲಿಫೋನಿನ ಬಾಯನ್ನು ಕೈಯಿಂದ ಮುಚ್ಚಿಕೊಳ್ಳುತ್ತಾ) ನೀನು ಯಾರೊಂದಿಗೆ ಮಾತನಾಡಬೇಕು? ರಾಮುಚಂದ್ರಯ್ಯನೆ? ಕಮಿರ್ಷ ಏಜೆಂಟೆ? (ಟೆಲಿಫೋನಿನಲ್ಲಿ) 'ಹಲೋ, ನಾನು ರಾಮುಚಂದ್ರಯ್ಯನವರೊಂದಿಗೆ... ಕಮಿರ್ಷ ಏಜೆಂಟ್ ...ಕಮಿಷ್ನರ್ ಏಜೆಂಟ್!.... ಪೇಷಂಟಲ್ರೀ, ಕ-ಮಿ-ರ್ಷ—ಏ-ಜೆಂ-ಟ್। ಅಂಥವರು ಯಾರು ಇಲ್ಲವೆ ಅಲ್ಲಿ?.... ಅದು ರಾಮುಚಂದ್ರಯ್ಯನವರ ಮನೆ ಅಲ್ಲವೆ? .... ಯಾವುದು! ಹುಚ್ಚಾಸ್ಪತ್ರೆಯೆ? ಇಲ್ಲ, ಇಲ್ಲ, ಹುಚ್ಚಾಸ್ಪತ್ರೆ ಬೇಕಿಲ್ಲ—ತಪ್ಪು ನಂಬರು, ತಪ್ಪು ನಂಬರು....'

ಯಾವುದೋ ತಪ್ಪು ನಂಬರು ಸಿಕ್ಕಿಬಿಟ್ಟಿತು—ಹುಚ್ಚಾಸ್ಪತ್ರೆಯಂತೆ!........ ನೀನು ಹೇಳಿದ ಅಂಕಿ ಯಾವುದು? ಮೂರು, ಒಂಭತ್ತು, ಎರಡು, ಸೊನ್ನೆ ಅಲ್ಲವೆ? ತಾಳು, ಮತ್ತೆ ನೋಡುತ್ತೇನೆ....

"ಹಲೋ, ಎಲ್ಲಿಂದ ಮಾತಾಡುವುದು? ಮೂರುಸಾವಿರದೊಂಬೈನೂರಿಪ್ಪತ್ತರಿಂದಲೆ? ನನಗೆ ರಾಮುಚಂದ್ರಯ್ಯನವರು ಬೇಕು, ಅವರು ಮನೆಯಲ್ಲಿದ್ದಾರೇನು? ....ಸ್ವಲ್ಪ ಕರಹೇಳಪ್ಪಾ....ಹಲೋ, ರಾಮುಚಂದ್ರಯ್ಯನವರೇ ಮಾತನಾಡುವುದು? ....ನಮ್ಮ ಸ್ನೇಹಿತರು ಶಿಪ್ಪಯ್ಯನವರು ಸಂಗಡ ಏನೋ ಮಾತನಾಡಬೇಕಂತೆ, ಸಾರ್....ಇಗೋ ಇಲ್ಲೇ ಇದ್ದಾರೆ...." ಮಾತಾಡಪ್ಪ....

ಆಯಿತೆ ಮಾತನಾಡಿ? ಏನು ಹೇಳಿದರು? ಮೋಕ್ತ, ಬಂದರೆ ವಿಶದವಾಗಿ ಚರ್ಚಿಸಬಹುದೆಂದೆ? ಹಾಗಾದರೆ ಈಗ ಅಲ್ಲಿಗೆ ಹೋಗಬೇಕು? ನಾಳೆ ಹೋದ ರಾಯಿತು? ಹಾಗಾದರೆ ಕುಳಿತುಕೊ, ಸ್ವಲ್ಪ ಹೊತ್ತು....

(ಟ್ರೀರ್‌ರಂಗ್, ಟ್ರೀರ್‌ರಂಗ್....ಟ್ರೀರ್‌ರಂಗ್, ಟ್ರೀರ್‌ರಂಗ್....) 'ಹಲೋ, ಎಲ್ಲಿಂದ! ಓಹೋ, ಏನುಸ್ವಾಮಿ? ಹೇಗಿದ್ದೀರಿ? ಏನು ಸಮಾಚಾರ?....ಕೆಲ ಸವೆ? ನನ್ನಿಂದ ಆಗಬೇಕೆ'.......ಅಗತ್ಯವಾಗಿ ಏನುಹೇಳಿ.... ನಿಮ್ಮ ಭಾವ ಮೈದುನನಿಗೆ? ಹೇಳಿಕಳುಹಿಸಬೇಕೆ? ಇದೇ ಬೀದಿಯಲ್ಲಿ ಮೂರನೆ ಮನೆಯೆ?.... ಆಗಲಿ, ಹೇಳಿ ಕಳುಹಿಸುತ್ತೇವೆ.... ನಮ್ಮ ಹುಡುಗನ ಸಂಗಡ ಈಗಲೇ ಹೇಳಿ ಕಳು ಹಿಸುತ್ತೇನೆ.... ತೊಂದರೆಯೇನೂ ಇಲ್ಲ, ಸ್ವಾಮಿ....ಅಯ್ಯೋ, ಅದಕ್ಕೇನು? ಏನೋ ಟೆಲಿಫೋನಿಟ್ಟುಕೊಂಡಿರುವುದರಿಂದ ನೀವೂ ನನಗೆ ಹೇಳುತ್ತೀರಿ....ಆಗಲಿ, ನಮಸ್ಕಾರ....'

ಈ ಟೆಲಿಫೋನಿರುವುದರಿಂದ ನೋಡು, ತಿಪ್ಪು; ಏನೋ ಎರಡು ಜನಕ್ಕೆ ಒಂದಷ್ಟು ಸಹಾಯಮಾಡಬಹುದು—ನಮ್ಮ ಕೈಲಾದ ಕಿಂಚಿತ್ತು, ಅಷ್ಟೆ....ಸ್ವಲ್ಪ ಕಾಫಿ ತೆಗೆದುಕೊಳ್ಳುತ್ತೀಯಾ? ಹಾಗೇ ಸ್ವಲ್ಪ ಫಲಾಹಾರಕ್ಕೆ ಏನಾದರೂ? ಸರಿ, ದೋಸೆ ತರಿಸಿಬಿಡೋಣ, ಇಲ್ಲೇ ಹತ್ತಿರ ಹೋಟಲಿದೆ. ಲೋ, ಮಗು, ಆ ಹೋಟಲಿಗೆ ಹೋಗಿ ಮೂರು ಬಿಸಿಬಿಸಿ ಮಸಾಲೆದೋಸೆ, ಮೂರು ಸ್ಪೆಷಲ್ ಕಾಫಿ ಹೇಳಿಬಿಟ್ಟು, ಆ ಕೆಂಪು ಮನೆ ಕಾಳಪ್ಪನವರಿಗೆ ನಿಮ್ಮ ಷಡ್ಡಕರು ನಿಮ್ಮನ್ನು ಸಿನೀಮಾ ಹತ್ತಿರ ಸಾಯಂಕಾಲ ಬರಬೇಕಂತೆ ಅಂತ ಟೆಲಿಫೋನ್ ಮಾಡಿದ್ದರು ಎಂದು ತಿಳಿಸಿಬಿಡು....

ಮೂರು ಮಸಾಲೆ ಯಾಕೆ ಅಂತೀಯಾ? ನನಗೆ ಈ ಹಾಳು ಮಸಾಲ್ ದೋಸೆ ಅಂದರೆ ನೋಡು, ಪ್ರಾಣ! ಒಂದು ತಿಂದರೆ ತೃಪ್ತಿಯೇ ಆಗುವುದಿಲ್ಲ! ಅದಕ್ಕೇ ಎರಡು ನನಗೆ, ನಿನಗೊಂದು—ಮೂರು ಹೇಳಿದುದು....ಯಾರೋ ಬಂದ ಹಾಗಿದೆ—ಯಾರು? ಮೂರ್ತಿರಾಯರೆ! ಏನು ಬಹಳ ಅಪರೂಪ, ಮೂರ್ತಿ ರಾಯರೆ? ಬನ್ನಿ, ಜತೆಯಲ್ಲಿರುವವರು ಯಾರು? ನಿಮ್ಮ ಸ್ನೇಹಿತರು? ದಯ ಮಾಡಿಸಿ, ಸ್ವಾಮಿ, ದಯಮಾಡಿಸಿ .... ಹೊಸ ಪರಿಚಯ....ಕುಳಿತುಕೊಳ್ಳಿ .... ನನ್ನಿಂದ ಉಪಕಾರವೆ? ಅಂಥಾದ್ದೇನು, ಸ್ವಾಮಿ, ಅಪ್ಪಣೆಯಾಗಬೇಕು ....ಮದ ರಾಸಿಗೆ ಟೆಲಿಫೋನುಮಾಡಬೇಕೆ? ಅಯ್ಯೋ, ಅದಕ್ಕೇನು, ಅಗತ್ಯವಾಗಿ ಮಾಡಿ, ಅಂದೆ.! ಟೆಲಿಫೋನಿರುವುದು ಇಂತಹ ಉಪಯೋಗಗಳಿಗೇ "ಅಲ್ಲವೆ? ಈಗಲೇ ಮಾಡೋಣಾಗಲಿ ...

ಉತ್ತರ ಬಂತೆ? ಇನ್ನೂ ಹದಿನೈದು ನಿಮಿಷ ಕಾಯಬೇಕೆ? ಕೂಡಿ, ನನಗೇನೂ ತೊಂದರೆಯಿಲ್ಲ—ಇನ್ನೂ ಹೊತ್ತಿದೆ. ಸ್ನಾನಮಾಡಿ ಎಲ್ಲಿಗೋ ಹೋಗಬೇಕು. ಆದರೂ ಪರವಾಯಿಲ್ಲ....

ಏನಯ್ಯಾ, ಮಾಣಿ, ದೋಸೆ ಬಿಸಿಯಾಗಿದೆತಾನೆ? ತಾ, ಇಲ್ಲಿಡು: ಮೂರ್ತಿ ರಾಯರೆ, ಒಂದು ಮಸಾಲೆಗೇನೂ ಅಭ್ಯಂತರವಿಲ್ಲವಷ್ಟೆ? ತಮ್ಮ ಸ್ನೇಹಿತರೂ ತೆಗೆದುಕೊಳ್ಳುವರು ತಾನೆ? ಎಷ್ಟು ತಂದಿದ್ದೀಯಯ್ಯ? ಮೂರೆ? ಆಗಲಿ, ಅವರು ಮೂವರಿಗೂ ಕೊಡು.... ಇಲ್ಲ, ನೀವು ತೆಗೆದುಕೊಳ್ಳಿ, ಅಂದರೆ— ನಾನು ಬೇರೆ ತರಿಸುತ್ತೇನೆ.... ಮಾಣಿ, ಮತ್ತೆರಡು ಮಸಾಲೆ ಬೇಗಮಾಡಿಸಿಕೊಂಡು ತೆಗೆದು ಕೊಂಡು ಬಾ. ಐದು ಕಾಫಿಯನ್ನು ತರಬೇಕು....

ನೀವು ತಿನ್ನುವುದಕ್ಕೆ ಆರಂಭಿಸಿ, ಅಂದರೆ.... ತಣ್ಣಗಾಗಿ ಹೋಗುತ್ತೆ— ದೋಸೆ ವಿಷಯದಲ್ಲಿ ಇತರರಿಗೆ ಕಾಯಲೇ ಬಾರದು! ನನ್ನದೂ ಈಗ ಬಂದು ಬಿಡುತ್ತೆ.... ಅದೋ, ಟೆಲಿಫೋನಿನ ಶಬ್ದ!—ಮದರಾಸಿಗೆ ಸಂಬಂಧ ಸಿಕ್ಕಿರ ಬಹುದು. ನಾನು ನೋಡುತ್ತೇನೆ, ನೀವು ತಿಂದು ಮುಗಿಸಿ....

'ಹಲೋ, ಎಲ್ಲಿಂದ ಮಾತನಾಡುವುದು? ಮೈಸೂರಿನಿಂದಲೆ? ಮದರಾಸಿ ನಿಂದಲ್ಲವೆ?........ ಹೌದು. ನಾನೇ ಅಪ್ಪೂರಾಯ ಮಾತನಾಡುತ್ತಿರುವುದು .... ಯಾರು? ನಮ್ಮ ಸಂಬಂಧೀಕರ ಕಡೆಯವರೆ?.... ಇಲ್ಲಿಗೆ ಬರುತ್ತಾರೆಯೆ?.... ಒಂದು ಘಂಟೆಗೆ?.... ಹೌದು, ಈಗ ಏನುಮಾಡಬೇಕು ಎಂದು ಹೇಳುತ್ತೀರಿ?.... ಸ್ಟೇಷನ್ನಿಗೆ ಬರುವುದಕ್ಕೆ ನನಗೆ ಪುರಸತ್ತೇ ಆಗುವದಿಲ್ಲವಲ್ಲ....ಮನೆ ಗೊತ್ತಿಲ್ಲವೆ? ಒಳ್ಳೆಯ ತಂಟೆಗೆ ಬಂತಲ್ಲಾ!.... ಹೂ, ಆಗಲಿ, ನೋಡೋಣ ... ಅಯ್ಯೋ, ಇದಕ್ಕೇನು ಥ್ಯಾಂಕ್ಸು ಅಂದರೆ!.... ನಮಸ್ಕಾರ''.

ಥ್ಯಾಂಕ್ಸಂತೆ, ಥ್ಯಾಂಕ್ಸು! ಇವರ ಥ್ಯಾಂಕ್ಸಿಗೆ ಬೆಂಕಿ ಹಾಕಿದರು!........ ಯಾರೋ ನಮ್ಮ ಸಂಬಂಧೀಕರ ಕಡೆಯವರಂತೆ, ಮೈಸೂರಿನಿಂದ ಬರುತ್ತಾರಂತೆ, ಸ್ಟೇಷನ್ನಿಗೆ ಹೋಗಿ ಅವರನ್ನು ಕರೆದುಕೊಂಡು ಬಂದು, ಊಟಮಾಡಿಸಿ, ನಾಲ್ಕು ಗಂಟೆ ಬಸ್ಸಿನಲ್ಲಿ ಮತ್ತಾವ ಊರಿಗೋ ಕಳುಹಿಸಿಕೊಡಬೇಕಂತೆ! ಬೇರೆ ಯಾರಿ ಗಾದರೂ ತಂತೀ ಕೊಟ್ಟರೆ ಸಮಯಕ್ಕೆ ಸರಿಯಾಗಿ ತಲಪುವುದೋ ಇಲ್ಲವೋ ಎಂದು ಮೈಸೂರಿನಿಂದ ತುರತಾಗಿ ನನಗೆ ಟೆಲಿಫೋನು ಮಾಡಿರುತ್ತಾರೆ!.... ಇನ್ನು ನನಗೆ ಒಂದು ದಿವಸದ ಕೆಲಸವೆಲ್ಲಾ ಹಾಳು....

ಕಾಫಿ ತಂದೆಯೇನಯ್ಯಾ, ಮಾಣಿ? ಕೊಡು ಅವರಿಗೆ.... ದೋಸೆ ಎಲ್ಲಿ? ಏನು, ತರಲಿಲ್ಲವೆ! ಹಿಟ್ಟು ಮುಗಿದು ಹೋಗಿತ್ತೆ? ಏಕಯ್ಯ ಹೀಗೆ ಮಾಡಿಬಿಟ್ಟೆ? ಬಹಳ ಚನ್ನಾಯಿತು!....ಹೂ, ಹೋಗಲಿ ಬಿಡು, ಕಾಫಿಯನ್ನಾದರೂ ತಂದಿದೀ ಯಲ್ಲಾ. ಅದೂ ಮೂರೇ ಲೋಟ ತಂದಿದೀಯಾ?........ ಹಾಲು ಮುಗಿದು ಹೋಗಿತ್ತೆ? ಹಾಳಾಗಿ ಹೋಗಲಿ, ಹೋಗು!.... ಇರುವುದನ್ನೇ ನಾಲ್ಕು ಬಟ್ಟಲು ಗಳಲ್ಲಿ ಬಸಿ!....

ಮತ್ತೆ ಹಾಳು ಟೆಲಿಫೋನು ಹೊಡೆದುಕೊಳ್ಳುತ್ತೆ — ತಮ್ಮದಿರಬಹುದು, ನೋಡಿ, ಸ್ವಾಮಿ.... ನಿಮ್ಮದೇಯೋ ? ಸರಿ, ಮಾತನಾಡಿ....ಈ ತಟ್ಟೆ ಬಟ್ಟಲು ಗಳನ್ನೆಲ್ಲಾ ತೆಗೆದುಕೊಂಡು ಹೋಗಯ್ಯಾ. ಬಿಲ್ಲು ತಂದಿದೀಯಾ ? ನನ್ನ ಲೆಕ್ಕಕ್ಕೆ ಸೇರಿಸಿಬಿಡು ಎಂದು ಹೇಳು.... ಆಯಿತೇನು ಸ್ವಾಮಿ, ಮದರಾಸಿಗೆ ಮಾತನಾಡಿ ? .... ಏನಿಲ್ಲ, ಅಂದ್ರೆ, ಇದಕ್ಕೆಲ್ಲಾ ಯಾಕೆ ಇಷ್ಟು ಉಪಚಾರದಮಾತು ?.... ಟೆಲಿ ಫೋನ್ ಮಾಡಿದುದರ ಛಾರ್ಜೆ ? ಏನೂ ಪರವಾಯಿಲ್ಲ, ಸ್ವಾಮಿ. ನನ್ನ ಲೆಕ್ಕಕ್ಕೆ ಹಾಕಿಕೊಳ್ಳುತ್ತಾರೆ, ಇದೆಲ್ಲಾ ಏನು ದೊಡ್ಡ ವಿಷಯ ಮಹಾ !.... ಮುಖ್ಯವಾಗಿ ತಮ್ಮಂಥವರ ಸ್ನೇಹ ಬೇಕು, ಅಷ್ಟೆ. ಹೋಗಿ ಬರುತ್ತೀರಾ ? ನಮಸ್ಕಾರ. ನಮಸ್ಕಾರ, ಮೂರ್ತಿರಾಯರೆ, ಹಾಗೇ ಪುರಸತ್ತಾದಾಗ ಯಾವಾಗಲಾದರೂ ಬನ್ನಿ.... ನೀನೂ ಹೊರಡುತ್ತೀಯಾ, ತಿಪ್ಪು ? ಒಳ್ಳೆಯದಪ್ಪ, ಹೊರಡು . . . .

ಲೋ, ಮಗು, ಒಳಗೆ ಹೋಗಿ ಅಮ್ಮನಿಗೆ ಹೇಳೊ— ಯಾರೋ ಮೈಸೂರಿ ನಿಂದ ಮೂರು ನಾಲ್ಕು ಜನ ಬರುತ್ತಾರಂತೆ, ಅವರಿಗೆಲ್ಲಾ ಒಂದಷ್ಟು ಸ್ನಾನ, ಊಟ, ಇತ್ಯಾದಿಗಳಿಗೆ ಏರ್ಪಾಟುಮಾಡಬೇಕಂತೆ ಅಂತ . . . ಏನು ? ತರಕಾರಿ ತರಬೇಕೆ ? . . . ತುಪ್ಪವೂ ಆಗಿಹೋಗಿದೆಯೆ ? . . . ಹ್ಞೂ, ಹೋಗಿ ತರಕಾರಿ, ಬೆಣ್ಣೆ ಕಳುಹಿಸಿ ಕೊಡುತ್ತೇನೆಂದು ಹೇಳು . . . ಕೈಯಲ್ಲಿ ಬೇರೆ ಕಾಸಿಲ್ಲ, ಸಾಲ ದಂಗಡಿಗೇ ಹೋಗಬೇಕು . . . ಅಂತೂ, ಹಾಳು ಟೆಲಿಫೋನಿರುವುದು . . .

—ಬೀರಣ್ಣ.

---

ದಕ್ಷಿಣ ಆಫ್ರಿಕಾದ ಚಿನ್ನವನ್ನು ಬ್ರಿಟಿಷರು ಭಾರತಕ್ಕೆ ಅಧಿಕ ಲಾಭಕ್ಕೆ ಮಾರುತ್ತಿರುವುದರಿಂದ ದಕ್ಷಿಣಾ ಆಫ್ರಿಕಾಕ್ಕೆ ನಷ್ಟ ಎಂದು ಅಲ್ಲಿನವರ ಟೀಕೆ.

—ಭಾರತಕ್ಕೆ ನಷ್ಟವೆಂದು ಯಾರೂ ಹೇಳುವುದಿಲ್ಲವಲ್ಲ !

✦ ✦ ✦

ತಣ್ಣಾಸೆ ಆಲುಗನ್ನು ಹಿಡಿದು ಕಿವಿಯಿಂದ ಕಿವಿಯ ತನಕ ಎಳೆದೆಳೆದು ಕ್ಷೌರ ಮಾಡಿದರಂತೆ.

—ಬರಗಾಲದಲ್ಲಿ ಎಲ್ಲವೂ ಹಾಗೆಯೇ.

✦ ✦ ✦

ಕೆಲವು ದೇಶಗಳಲ್ಲಿ ಸಾರ್ವಜನಿಕ ಭಾಷಣಗಳನ್ನು ಕೇಳಲು ಪ್ರವೇಶ ಧನ ವನ್ನು ಕೊಡಬೇಕಂತೆ.

—ಅದಕ್ಕೂ ಆಶ್ಚರ್ಯದ ಸಂಗತಿ, ಜನರು ಹಣಕೊಟ್ಟು ಪ್ರವೇಶಪಡೆದು ಭಾಷಣಗಳನ್ನು ಕೇಳುತ್ತಾರಂತೆ.

✦ ✦ ✦



# ಒಂದು ದಿನ

## ಅವನು ಕಾಲೇಜಿಗೆ ಹೋಗುವನು

ಈಗಿನಿಂದ ಇನ್ನು 20 ವರ್ಷಗಳಿಗೆ ಅವನು ವಿಶ್ವವಿದ್ಯಾನಿಲಯದಲ್ಲಿ ವ್ಯಾಸಂಗ ಮಾಡಲು ಹೋಗುವನು. ವ್ಯಾಪಾರ ಅಥವಾ ಔದ್ಯೋಗಿಕ ಪ್ರಪಂಚದಲ್ಲಿ ವಿಶ್ವವಿದ್ಯಾಲಯದಲ್ಲಿ ತರಪೇತಾದವರನ್ನೇ ಆರಿಸುವರು.

ನೀವು ಬಹು ಸುಲಭವಾದ ಮತ್ತು ಕ್ರಮವಾದ ರೀತಿಯಲ್ಲಿ ಹಣವನ್ನು ಕೂಡಿಡುವುದರಿಂದ ಅವನು ಸಂಸ್ಕೃತಿಯಲ್ಲೂ ಜ್ಞಾನದಲ್ಲೂ......ಶಾಸ್ತ್ರೀಯದಲ್ಲೂ ಸಾಮಾಜಿಕದಲ್ಲೂ ಸಿದ್ಧತೆ ಹೊಂದಿ ಅಮೌಲ್ಯವಾದ ಜಯವನ್ನು ಪಡೆಯುವನು.

**ಅವನ ವಿದ್ಯಾಭ್ಯಾಸಕ್ಕಾಗಿ**

**ಮೈಸೂರು ಸರ್ಕಾರದ ಜೀವವಿಮಾ ಶಾಖೆಯ ಮೂಲಕ**

# ಕೂಡಿಡಿ

ಕೆಳಗಿನ ವಿಳಾಸಕ್ಕೆ ಬರೆದರೆ ಸಂತೋಷದಿಂದ ವಿವರಗಳು ಕೊಡಲ್ಪಡುವುವು.

**ಸೆಕ್ರೆಟರಿ,**

**ಮೈಸೂರು ಸರ್ಕಾರಿ ಜೀವವಿಮಾ ಶಾಖೆ, ಬೆಂಗಳೂರು**

[ ಮೈಸೂರಿನವರಿಗೆಲ್ಲಾ ತೆರೆದಿದೆ ]

ಮಧುರವಾದ ಚಾಕೊಲೇಟ್ ಮಿಶ್ರವಾದ
ಕಾಲ್ಸಿಯಂ ಗ್ಲೂಕೊನೇಟ್ ಮತ್ತು
ವಿಟಮಿನ್ 'ಡಿ'

# ಕಾಲ್ಸಿಯೊನೇಟ್
## ಬಿಲ್ಲೆಗಳು

ಕಾಲ್ಸಿಯಂ ಕಡಿಮೆಯಾದ ಖಾಯಿಲೆಗಳೆಲ್ಲಲ್ಲಾ—
ಬಸುರಿಯರು ಮತ್ತು ಬಾಣಂತಿಯರಿಗೆ—
ಬೆಳೆಯುವ ಮಕ್ಕಳಿಗೆ, ಇತ್ಯಾದಿಗಳಿಗೆ
ಅವಶ್ಯಕವಾದದ್ದು.

— ಐ. ಟಿ. ಎಲ್. ತಯಾರಿಕೆ —



ಗೌರ್ನಮೆಂಟ್ ಇಂಡಸ್ಟ್ರಿಯಲ್ ಮತ್ತು ಟೆಸ್ಟಿಂಗ್
ಲೆಬೋರೇಟರಿ,

ಮಲ್ಲೇಶ್ವರಂ, : : ಬೆಂಗಳೂರು.

ಭಾರತೀಯ ಕಾರ್ಮಿಕರಿಂದ

ಭಾರತೀಯ ಬಂಡವಾಳಗಾರರಿಂದ

ಭಾರತೀಯ ಕಲಾಕೌಶಲ್ಯದಿಂದ

ಕೂಡಿರುವುದೇ



# ಬೆಂಗಾಲ್ ಲ್ಯಾಂಪ್ಸ್

ತಯಾರಿಕೆಯ ವೈಶಿಷ್ಟ್ಯ

—

ಭಾರತದಲ್ಲೆಲ್ಲಾ ಉತ್ತಮವಾದುದೆಂದು

ಖ್ಯಾತಿಪಡೆದಿದೆ

"ಕ್ಯಾಪ್ಟನ್ ಮಾರ್ವೆಲ್"ಗೂ ಮಿಗಿಲಾದ

ರಿಪಬ್ಲಿಕ್ ಕಂಪನಿಯ ಇನ್ನೊಂದು ಸೀರಿಯಲ್

# "ಸ್ಪೈ ಸ್ಮಾಶರ್"

ಬೆಂಗಳೂರು ನಗರದ

ಪ್ಯಾರಾಮೌಂಟ್ ಥಿಯೇಟರಿನಲ್ಲಿ

ಮುಂದಿನ ಬದಲಾವಣೆ

ವಿವರಗಳಿಗೆ:

**ಗುಡ್‌ವಿನ್ ಪಿಕ್ಚರ್ಸ್ ಕಾರ್ಪೊರೇಷನ್**

ಸುಬೇದಾರ್ ಛತ್ರಂ ರಸ್ತೆ, ಬೆಂಗಳೂರು ಸಿಟಿ

ಅಲ್ಲದೆ, ಬೆಜವಾಡ – ತಿರುಚನಾಪಳ್ಳಿ – ಎರ್ನಾಕುಲಂ – ಶಾಖೆಗಳು.

— ಬರೆಯಿರಿ.